॥ श्रीः ॥

ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯ.

ಉಡುಪಿ.



## ದಾಸರಪದಗಳು.

# ಪುರಂದರದಾಸರಕೀರ್ತನೆ

## ಭಾಗ ೪.



ಎರಡನೆಯ ಛಾಪಾ.

ಉಡುಪಿ ಶ್ರೀಕೃಷ್ಣಮುದ್ರಣಾಲಯದಲ್ಲಿ ಮುದ್ರಿಸಲ್ಪಟ್ಟಿತು.

**1929.**

ಬೆಲೆ: ೧೦ ಆಣೆ.

# ಪ್ರಸ್ತಾವನೆ.

ಶ್ರೀಪರಮಾತ್ಮನ ಅನುಗ್ರಹ ಸಂಪಾದನೆಗೆ ಮುಖ್ಯ ಸಾಧನವಾದ ಕೀರ್ತನಮಾರ್ಗಕ್ಕೆ ಪ್ರವರ್ತಕರಾದ ಪುರಂದರದಾಸವರ್ಯರ ಬಹುಲಕ್ಷ ಕೀರ್ತನಗಳಲ್ಲಿ ಕೆಲವು ಕೀರ್ತನರತ್ನಗಳನ್ನು ಸಂಗ್ರಹಿಸಿ ೧—೨—೩ನೆ ಭಾಗಗಳನ್ನಾಗಿ ಮುದ್ರಿಸಿದ ಮೇಲೆ, ಕೆಲವು ಮಹನೀಯರ ಸಲಹೆಯಿಂದ ೪ನೆ ಭಾಗವನ್ನು ಮುದ್ರಿಸಲುದ್ಯೋಗಿಸಿದಾಗ ಪ್ರಥಮಮುದ್ರಣದಲ್ಲಿ ಕೆಲವು ಕೀರ್ತನೆಗಳು ಹಿಂದಿನ ೩ ಭಾಗಗಳಲ್ಲೇ ಸೇರಿದ್ದುದರಿಂದಲೂ, ಕೆಲವು ಪುರಂದರದಾಸರ ಅಂಕಿತ ಮಾತ್ರವಿದ್ದು ಬೇರೆ ದಾಸರ ಕೀರ್ತನಗಳೆಂದು ಹಲವರು ಸೂಚಿಸಿದ್ದುದರಿಂದಲೂ, ಮುಂಚಿನ ೩ ಭಾಗಗಳಷ್ಟು ಕೀರ್ತನೆಗಳನ್ನು ಅದರಲ್ಲಿ ತುಂಬಿಸಲಾಗದೆ ಸ್ವಲ್ಪ ಕೀರ್ತನೆಗಳಿಂದಲೇ ಪ್ರಕಟಿಸಬೇಕಾಗಿ ಬಂದುದರಿಂದ, ಕಾಲಕ್ರಮದಿಂದ ಹ್ರಾಸವಾಗುತ್ತಿರುವ ಈ ಪವಿತ್ರ ಕೀರ್ತನಗಳನ್ನು ಪ್ರಕಟಿಸಿ ಸಜ್ಜನರ ಸತ್ಕಾರ್ಯಕ್ಕೆ ಸಹಾಯಕನಾಗಬೇಕೆಂದು ಎಷ್ಟು ಸಾಹಸಪಟ್ಟರೂ ಕೈಸಾಗದಿದ್ದುದಕ್ಕಾಗಿ ವ್ಯಸನಪಡುತ್ತಿರಲು, ಧರ್ಮಕಾರ್ಯಕ್ಕೆ ದೇವರ ಬೆಂಬಲವಿದೆ ಯೆಂಬ ಸಜ್ಜನರ ವಚನವಂತೆ ಕೆಲವು ಮಹನೀಯರು ಹಲವು ಕೀರ್ತನೆಗಳನ್ನು ಕಳುಹಿಸಿದುದರಿಂದ ಮರಳಿ ಉಲ್ಲಾಸಗೊಂಡು ಮೊದಲಿನ ೩ ಭಾಗಗಳಷ್ಟೇ ೪ನೆ ಭಾಗವನ್ನೂ ಬೆಳೆಸಿ ಈ ದ್ವಿತೀಯ ಮುದ್ರಣದಿಂದ ಪ್ರಕಟಿಸಲು ಅನುಕೂಲವಾದುದಕ್ಕೆ ಶ್ರೀಹರಿಗುರುಗಳ ಚರಣಾರವಿಂದಕ್ಕೆ ನನ್ನ ಅನಂತ ಪ್ರಣಾಮಗಳು.

ಇದೇ ಕಾಲಕ್ಕೆ ಸರಿಯಾಗಿ ಈ ಮೊದಲೂ ಅನೇಕ ಸಲ ಸಹಾಯ ಮಾಡುತ್ತಿದ್ದ ನಾರ್ತ್ ಆರ್ಕಾಡುಜಿಲ್ಲಾ ಪೋಳೂರುತಾಲೂಕಾ ಪೋಳೂರಲ್ಲಿರುವ ಓಘೂರು ಮಿರಾಸಿದಾರರು ಶ್ರೀಮಾನ್ ಹಜೀಬು ರಂಗರಾಯ

ರೆಂಬ ಮಹಾಶಯರು ಇನ್ನೂ ಅನೇಕ ಕೀರ್ತನೆಗಳನ್ನು ಸಂಗ್ರಹಿಸಿ ಕಳುಹಿಸಿದುದರಿಂದ ಈ ೪ನೆ ಭಾಗಕ್ಕೆ ಅನುಕೂಲವಾದುದು ಮಾತ್ರವಲ್ಲದೆ, ಇನ್ನು ಮುಂದೆ ಪುರಂದರದಾಸರ ೫ನೆ ಭಾಗವನ್ನು ಕೂಡ ಮುದ್ರಿಸಲು ಅನುಕೂಲವಾದುದಕ್ಕೆ ಈ ಮಹಾಶಯರಿಗೆ ನನ್ನ ಕೃತಜ್ಞತಾಪೂರ್ವಕ ಅನೇಕ ವಂದನೆಗಳು.

ಶಕ್ತ್ಯನುಸಾರ ಈ ಸತ್ಕಾರ್ಯದಲ್ಲಿ ಪ್ರವರ್ತಿಸಿ ಸಜ್ಜನರನ್ನು ಸೇವಿಸಲುಪಕ್ರಮಿಸಿದ ನನಗೆ ಕೀರ್ತನಸಂಗ್ರಹವುಳ್ಳ ಮಹನೀಯರು ದಯವಿಟ್ಟು ಆ ಕೀರ್ತನೆಗಳನ್ನು ಕಳುಹಿಸುವಂತೆ ಸರ್ವಪ್ರೇರಕನಾದ ಮಧ್ವಾಂತರ್ಗತ ಶ್ರೀಕೃಷ್ಣನು ಅವರಿಗೆ ಪ್ರೇರಿಸಲೆಂದು ಆತನಡಿದಾವರೆಗಳಲ್ಲಿ ಪ್ರಾರ್ಥಿಸುವೆನು.

ಇತಿ ಸುಜನವಿಧೇಯ,

ಉಡುಪಿ, ತಾ. 1—8—'29.

ಪಾವಂಜೆ ಗುರುರಾವ್,
ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯ.

# ಅನುಕ್ರಮಣಿಕೆ.

ಪದಸಂಖ್ಯೆ.



ಡ. ಪದಸಂಖ್ಯೆ.

ಪ. ಪದಸಂಖ್ಯೆ.



ಬ.



ಭ.



ಮ.



ಪದಸಂಖ್ಯೆ.



ಯ



ರ.



ಲ.



ವ.

**ಸಪೂರ್ಣವು.**



॥ ಶ್ರೀಃ ॥

॥ ಶ್ರೀಗುರುರಾಜೋ ವಿಜಯತೇ ॥

ಶ್ರೀಪಾಂಡುರಂಗವಿಟ್ಠಲಾತ್ಮಕ

ಶ್ರೀಗೋಪಾಲಕೃಷ್ಣಾಯ ನಮಃ

# ಪುರಂದರದಾಸರ ಕೀರ್ತನೆಗಳು.

## ನಾಲ್ಕನೆಯ ಭಾಗವು.

### ೧. ರಾಗ ಭೂಪಾಳಿ, ಅಟತಾಳ.

ಎಲ್ಲಿ ಶ್ರೀತುಲಸಿಯ ವನವು । ಅಲ್ಲಿ ಒಪ್ಪುವರು ಶಿರಿನಾರಾಯಣರು ॥ ॥ ಪಲ್ಲ ॥ ಗಂಗೆಯಮುನೆ ಗೋದಾವರಿ ಕಾವೇರಿ । ಕಂಗೊಳಿಸುವ ಮಣಿ ಕರ್ಣಿಕೆಯು ॥ ತುಂಗಭದ್ರೆ ಕೃಷ್ಣವೇಣಿ ತೀರ್ಥಗಳೆಲ್ಲ। ಮುಂಗಾಡಿಸುವ ಮೂಲ ವೃಕ್ಷದಲಿರುವರು ॥ ೧ ॥ ಸರಸಿಜಭವ ಭವ ಸುರಪ ಪಾವಕ ಚಂ। ದಿರ ಸೂರ್ಯ ಮೊದಲಾದವರು ॥ ಶಿರಿರಮಣನ ಆಜ್ಞದಿ ಅಗಲ ದಂತೆ । ತರುಮಧ್ಯದೊಳು ನಿತ್ಯ ನೆಲಸಿಪ್ಪರು ॥ ೨ ॥ ಋಗ್ವೇದ ಯಜು ರ್ವೇದ ಸಾಮ ಅಥರ್ವಣ। ಅಘಹಳಿಸುವ ವೇದ ಘೋಷಗಳು ॥ ಅಗ್ರ ಭಾಗದಲ್ಲಿದೆ ಬೆಟ್ಟದೊಡೆಯ ಅಲ್ಲಿ । ಶೀಘ್ರದಿ ಒಲಿವ ಶ್ರೀಪುರಂದರ ವಿಠಲ ॥ ೩ ॥

### ೨. ರಾಗ ಆನಂದಭೈರವಿ, ರೂಪಕತಾಳ.

ಎನ್ನ ಜನ್ಮ ಸಫಲವಾಯಿತು । ಎನ್ನನುದ್ಧರಿಸಲಾಗದೆ ॥ ಪಲ್ಲ ॥ ಎನ್ನ ಜನ್ಮ ಸಫಲವಾಯಿತನ್ಯರನು ಬಯಸಲ್ಯಾಕೆ। ತನ್ನ ತಾನೊಲಿದ ವ್ಯಾಸ ಮುನಿರಾಯನ ಕೈಯ್ಯ ಸೇರಿರೊ ॥ ಅನುಪಲ್ಲ ॥ ಸಿರಿಯರಸನ ಕರುಣ

ದಾಳು ಸರಸಿಜ ಸಂಭವನ ಪಿತನ । ಸುರರೊಡೆಯನ ಸಕಲ ವೇದ ಅರ ಸುವಂಥ ಹರಿಯ ॥ ಪರದೇವತೆ ಇದೆ ಇದೆಯೆಂದು ಕರಕಮಲದೊಳಿಟ್ಟು ತೋರುವ । ಪರಮಹಂಸ ವ್ಯಾಸರಾಯರ ಚರಣವ ನೆರೆನಂಬಿರೆಲ್ಲರು ॥ ೧ ॥ ಜ್ಞಾನ ಭಕುತಿ ವೈರಾಗ್ಯವ ನಿ । ಧಾನದಿ ನಮಗಿತ್ತು ಪೊರೆವ । ದಾನವಾರಿಯ ಗುಣಗಣವ ಬಲ್ಲ ಮೌನಿಗಳ । ವರಶಿರೋರನ್ನನ ॥ ತಾನೆ ದೇವರೆಂಬ ಅಸುರರ । ಕಾನನವ ತರಿದೊಟ್ಟುವ । ಆನಂದ ತೀರ್ಥರಪಟ್ಟ । ದಾನೆ ವ್ಯಾಸರಾಯರಿರಲು ॥ ೨ ॥ ಹಿಂದೆ ಸಾವಿರ ಜಿಹ್ವೆಯಲಿ ಮು । ಕುಂದನಹಿರಾಜ ಪೊಗಳು । ವಂದದಿಂದ ಹರಿಯ ಗುಣಗ । ಳಿಂದು ತುತಿಸಿ ಸುಜನರ ಕೃಪೆ । ಯಿಂದ ಪೊರವುತ್ತಭಿನವ ಪು । ರಂದರ ವಿಠಲನ್ನ ಜಗಕೆ । ತಂದು ತೋರುವ ವೈಷ್ಣವಕುಮು । ದೇಂದು ವ್ಯಾಸ ರಾಯರಿರಲು ॥ ೩ ॥

## ೩. ರಾಗ ಶಂಕರಾಭರಣ, ಆಟತಾಳ.

ತಂಗಾಳಿ ವಶವಲ್ಲವೆ ॥ ಪಲ್ಲ ॥ ಅಂಗಳದೊಳಗೆ ಬೆಳ । ದಿಂಗಳು ತುಂಬಿತು ॥ ಅನುಪಲ್ಲ ॥ ಚಂದನದಿಂದ ಕು । ಚಂಗಳ ತವಿಸಲು । ಇಂದು ಕಿರಣ ಬಂದು ಕಂದಿಸಲು ॥ ಮಂದಮಾರುತದಲಿ । ಸಿಂದಿರಲಾರೆನೆ । ಹೊಂದಿದ ತಾಪವು ಹೋಹದೇನೆ ಹೆಣ್ಣೆ ॥ ೧ ॥ ಭಂಗಾರ ಒಡಲಿಗೆ ಭಾರವಾಗಿ ಯಿದೆ । ಶೃಂಗರಿಸಿ ಕೊಳಶೇರಲಿಲ್ಲ ॥ ಅಂಗಜ ಶರತಾಪ ತಾಳಲಾರೆ ನಾನು । ಉಂಗುರವು ನಿನಗೆ ಉಚಿತವೇನೆ ಹೆಣ್ಣೆ ॥ ೨ ॥ ಮುನ್ನೆ ಪುರಂದರವಿಠಲರಾಯ ಕೂಡಿ । ಇನ್ನು ಬಾರೆಂದರೆ ಬಾರನ್ಯಾಕೆ ॥ ಅನ್ನಪಾನ ರುಚಿಯಾಗಿ ತೋರಲಿಲ್ಲ । ನಿನ್ನಾಣೆ ಕಣ್ಣಿಗೆ ನಿದ್ರೆ ಬಾರದು ಹೆಣ್ಣೆ ॥ ೩ ॥ ಶ್ರೀಃ ॥

## ೪. ರಾಗ ಗಮನಶ್ರಮ, ಅಟಭಾಪುತಾಳ.

ಧೂಪಾರತಿಯ ನೋಡುವ ಬನ್ನಿ । ನಮ್ಮ । ಗೋಪಾಲಕೃಷ್ಣದೇವರ ಪೂಜೆಯ ॥ ಪಲ್ಲ ॥ ಮದ್ದಳೆ ಜಾಗಟೆ ತಾಳ ದಂಡಿಗೆ ಭೇರಿ । ದಿಂಧಿಮಿ ಧಿಮಿಕೆಂಬ ವಾದ್ಯಗಳು ॥ ಹೊದ್ದಿದ್ದ ಧವಳಶಂಖದ ಘೋಷಣೆಯಿಂದ ।

ಪದ್ಮನಾಭದೇವರ ಪೂಜೆಯು ॥ ೧ ॥ ಅಗಿಲು ಚಂದನ ಗಂಧ ಗುಗ್ಗುಳ ಸಹಿತಾಗಿ। ಮಘಮಘಿಸುವ ಧೂಪದಾರತಿಗೆ॥ ಮಿಗಿಲಾದ ಏಕಾರತಿಯ ಬತ್ತಿಗಳಿಂದ। ಜಗನ್ನಾಥ ನಮ್ಮ ದೇವರ ಪೂಜೆಯು ॥ ೨ ॥ ಹರಿ ಸರ್ವೋತ್ತಮನೆ ಭಕ್ತರಿಗೆ ಆಧಾರನೆ। ಪರಮ ಮಂಗಳ ಮೂರ್ತಿ ಪಾವನನೆ॥ ನೆರೆಯಾಗಿ ಸಲಹುವ ಪುರಂದರವಿಠಲನ। ಚರಣಕಮಲಕಾರತಿಯೆತ್ತುವ ॥೩॥

## ೫. ರಾಗ ಕಾಪಿ, ಏಕತಾಳ.

ಹಸಿವೆ ಆಗುತಿದೆ ಅಮ್ಮ ಕೇಳೆ। ಹಸನಾದ ಅವಲಕ್ಕಿ ಬೆಲ್ಲ ಕಲಿಸಿಕೊಡೆ ॥ ಪಲ್ಲ ॥ ಬಿಸಿ ಬಿಸಿ ಅನ್ನ ಕೈಸುಡುತಿದೆ ಬದಿಯಲ್ಲಿ ಕೂಡೆ ॥ ॥ ಅನುಪಲ್ಲ ॥ ಖಾರಸಾರು ಮಾಡಬೇಡ ಉಣ್ಣಬಾರೆನೆ। ಎನಗೆ। ಸೀಸಾರು ಮಾಡಿದರೆ ಬ್ಯಾಗನುಂಬುವೆ ॥ ೧ ॥ ತೋಡ ತುಪ್ಪ ಹಾಕಿದರೆ ನೆಲಕೆ ಒತ್ತುವೆ। ಎನಗೆ। ಗಟ್ಟಿತುಪ್ಪ ಹಾಕಿದರೆ ಬೇಗ ನುಂಗುವೆ ॥ ೨ ॥ ನೀರು ಮೊಸರು ಹಾಕಿದರೆ ನೆಲಕೆ ಒತ್ತುವೆ। ಎನಗೆ ಗಟ್ಟಿಮೊಸರು ಹಾಕಿದರೆ ತಟ್ಟನುಂಗುವೆ ॥ ೩ ॥ ತಟ್ಟನೇಳೊ ಕೃಷ್ಣರಾಯ ಬಟ್ಟಲು ತೊಳೆದೇನು। ನಿನಗೆ। ಉಕ್ಕುವ ಹಾಲಿನ ಕೆನೆಯ ಕೈಯಲಿ ಕೊಟ್ಟು ಕಳುಹುವೆನು ॥ ೪ ॥ ಕಂದರೆಲ್ಲ ಕರೆಯ ಬಂದ್ರು ಅಮ್ಮ ಕೇಳೆ। ಬಾಳೆ। ಹಣ್ಣು ಬೆಲ್ಲ ಚೂರು ಕೈಯಲ್ಲಿ ಕೊಡೆ ॥ ೫ ॥ ಕಂದರೆಲ್ಲ ಕರೆಯ ಬಂದ್ರು ತಾಯಿ ಕೇಳೆ। ಸಕ್ಕರೆ। ಕೊಬ್ಬರಿಯ ಕುಟ್ಟಿ ಸೆರಗಿಲಿ ಹಾಕೆ ॥ ೬ ॥ ವೃಂದಾವನದೊಳಗೆ ಬಂದು ಅಮ್ಮ ಕೇಳೆ। ಬಲು। ಚಂದದ ಗೊಂಬೆಯ ಹೂಡಿ ಕಟ್ಟಿಕೊಡೆ ॥ ೭ ॥ ಒಳಗೆ ಆಡು ಒಳಗೆ ಆಡು ಬಾರೊ ರಂಗ। ಅಲ್ಲಿ। ಹೊರಗೆ ಬೂಚಿ ಮುಖದ ಹುಲಿ ತಿರುಗುತಿದೆ ॥ ೮ ॥ ಓಡಿ ಬಾರೊ ಓಡಿ ಬಾರೊ ಪುರಂದರವಿಠಲ। ಅಲ್ಲಿ। ಆಡಿನ ಮುಖದ ಹುಲಿ ತಿರುಗುತಿದೆ ॥ ೯ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೬. ರಾಗ ನಾಟಿಕುರಂಜಿ, ಮಟ್ಟೆತಾಳ.

ನಡೆದು ಬಾ ನಾಲ್ವರಿದ್ದೆಡೆಗೆ ಯೆನ್ನಯ್ಯನೆ। ನಮ್ಮ ನಿಮ್ಮ ತೊಡಕ ನಿರ್ಣೈಸಿಕೊಂಬೆನೊ ತೋಯಜಾಕ್ಷ ॥ ಪಲ್ಲ ॥ ಆದಿಯಲ್ಲಿ ಯೆನ್ನ

ಮತ್ತ್ಯಾರು ನಿನ್ನ । ಪಾದಸೇವೆಯ ಮಾಡಿ ಹಲವು ಕಾಲ ॥ ಸಾಧಿಸಿದ ರ್ಥವ ಸಲೆಯೆನ್ನ ಜೀವಕ್ಕೆ । ಆಧಾರವಾದುದ ಅದನ್ಯಾಕೆ ಕೊಡಲೊಲ್ಲಿ ॥ ॥ ೧ ॥ ಸಾಲವ ಕೊಡವಲ್ಲಿ ಸಲೆತೌಳಿಯ ಮಾಡಿ । ಕಾಲವ ಕಳೆವೆ ನೀ ಕಪಟದಿಂದ ॥ ಮೇಲಾದ ವಿಬುಧರು ಮೆಚ್ಚುವಂತೆ ನಿನ್ನ । ಕಾಲಿಗೆ ಯೆನ್ನ ಕೊರಳ ಹತ್ತಕಟ್ಟುವೆ ॥ ೨ ॥ ಸನಕಾದಿ ಮುನಿಗಳ ಸಾಕ್ಷಿಯಿಂದಲಿ ಯೆನ್ನ । ಮನಕೆ ಬಪ್ಪಂತೆ ನೀ ಘನ ನಂಬಿಗೆ ಯಿತ್ತೆ ॥ ಅನುಮಾನವ್ಯಾಕಿನ್ನು ಪಾಲಿಸಯ್ಯ ಈಗ । ವನಜಾಕ್ಷ ತಂದೆ ಶ್ರೀಪುರಂದರವಿಠಲ ॥ ೬ ॥

## ೭. ರಾಗ ಆರಭಿ, ತ್ರಿವುಡೆತಾಳ.

ನರವರ್ಯ ಭೀಮಸೇನ ನಾರಿಗೆ ಕುಸುಮವ । ತರುವೆನೆನುತ ಬೇಗ ತೆರಳಿದನು ॥ ಪಲ್ಲ ॥ ಕರಿರಾಜನಂತೆ ದೊಡ್ಡ ಕಾನನ ಮಧ್ಯದಲಿ । ಗಿರಿವರವನೇರಿದನೆ ಉರುಪುಂಗವ ॥ ಅನುಪಲ್ಲ ॥ ಕನಕದ ವೃಕ್ಷವ ಕರದಲಿ ಪಿಡಿದನು । ಧನುಸು ಬಾಣಂಗಳ ಧರಿಸಿಕೊಂಡು । ಮನೋವೇಗದಿಂದ ಬಂದ ಮಾನುಷ್ಯ ಕರ್ಮ ಸಿಂಧು । ಹನುಮನೆಂಬವನ ಕಂಡ ಹರುಷದಿಂದ ॥ ೧ ॥ ಕದಳಿಯ ಬನದಲ್ಲಿ ಕಂಡನೆ ಹನುಮನ । ನದರಿಲ್ಲದೆ ಕುಳಿತು ನಿದ್ರೆಗೈವನಾ ॥ ಮುದದಿಂದ ನುಡಿಸೆ ಬೆದರಿಸಿ ನುಡಿದನು । ಇದಿರಾಗಿದ್ದ ಕಪಿಯ ಯೇಳೆಂದು ಭೀಮ ॥ ೨ ॥ ಭೀಮನ ಮಾತ ಕೇಳಿ ಭೀತಿಯಿಲ್ಲದೆ ಹನುಮ । ಸಾಮದಿ ನುಡಿದನೆ ಸೋಮ ವಂಶನ ॥ ಈ ಮೃಗಂಗಳ ತಂದೆ ಈ ವಿಧದಿಂದ ಬಂದ । ದಾರ ಕಂದನೋ ನೀನು ಪೇಳೆಂದನು ॥ ೩ ॥ ಕುರುರಾಯ ವಂಶದಿ ಕುಂತಿಯ ಜಠರದಿ । ಮರುತಜ ಪ್ರಾಣೇಶರ ಮಗ ಭೀಮನು ॥ ದುರುಳ ಕಿರ್ಮೀರ ದುಷ್ಟ ಹಿಡಿಂಬಕ । ಕರುಳುಗಳ ಬಗೆದು ಬಂದವ ನಾನು ॥ ೪ ॥ ಹನುಮ ಕಾಣೆಲೊ ನಾನು ಹರಿರೂಪ ರಾಘವರ । ಮನವರಿತು ಸೇವೆ ಮಾಡಿದಾ ದೂತ ॥ ವನಧಿಯ ದಾಟಿ ಬಂದೆ ವನಜಾಕ್ಷಿಗುಂಗುರವಿತ್ತೆ । ವನವ ಕಿತ್ತಿದೆ ಲಂಕೆ ಉರಿ ಮಾಡಿದೆ ॥ ೫ ॥ ರಾಮರ ದಯದಿಂದ ರಾಕ್ಷಸರನು ಗೆದ್ದೆ । ಭೂಮಿ ದಾರಿ ಹಿಡಿದೆ ಜನ್ನಿ ಶಾಲೆಯ ॥ ಆದರೇನಾಯಿತು ನಾಟಕಾದ್ರಿ ಸರಿ

ಯಾದ । ಭಾಗವತ ತೋರಿಸಿದ ಗುರು ಮುಖ್ಯಗೆ ॥ ೬ ॥ ಕಂಡೆನಯ್ಯ ನಿನ್ನ ರೂಪ ಕಾಣದ ಮನುಜಗೆ । ದಂಡ ಪ್ರಣಾಮ ಮಾಡೆ ದಾರಿ ತೋರಿದ ॥ ಪಾಂಡವನೆನಿಸಿ ದೊಡ್ಡ ಪರ್ವತದ ಮಧ್ಯದಲಿ । ಚಂಡ ದೈತ್ಯರ ಸುತ್ತಿ ಚೆಂಡನಾಡಿದ ॥ ೭ ॥ ಶೀತಳ ಸರೋವರ ಶೀಘ್ರದಿಂದಲಿ ದಾಟಿ । ನೂತನ ಕುಸುಮಂಗಳ ನೂರಾರು ತಂದು ॥ ಪ್ರೀತಿಯಿಂದಲಿ ತನ್ನ ಪ್ರೀಯಳಿಗಿತ್ತನು । ಭ್ರಾತುಗಳ ಪಡೆದ ಭಾಗ್ಯವೇನೆಂದ ॥ ೮ ॥ ಒಬ್ಬನೆ ಸಕಲ ಓದಿದ ಮನುಜಗೆ । ಇಬ್ಬರ ಭಾಗವ ತೋರಿ ಈ ರೀತಿ ಯಿಂದ ॥ ಸಬ್ರಹ್ಮ ಪದವಿತ್ತ ಪುರಂದರವಿಠಲ । ಸುಬ್ರಹ್ಮಣ್ಯ ವೇದಾಂತ ನಿಧಿಗೊಲಿದ ॥ ೯ ॥ ಶ್ರೀಃ ॥

## ೮. ರಾಗ ನವರೋಜು, ಏಕತಾಳ.

ಇಕ್ಕೋ ನವನೀತ ಚೋರ ಸಿಕ್ಕಿದನಮ್ಮ । ಹೆ । ಮಕ್ಕಳೆಲ್ಲರು ಕೂಡಿ ನಮ್ಮಕ್ಕರ ತೀರಿಸಿಕೊಂಬ ॥ ಪಲ್ಲ ॥ ಅಂದು ಮೊದಲಾಗಿ ನಮ್ಮ । ಮಂದಿ ರಗಳೆಲ್ಲ ಪೊಕ್ಕು । ತಿಂದ ವಿಾಸಲ ಬೆಣ್ಣೆ । ದಂಥೆ ಮಾಡಿ ಪೋದನಕ್ಕ । ಬಹು । ದಂಥೆ ಮಾಡಿ ಪೋದನಕ್ಕ ॥ ೧ ॥ ಗಾಢದಿಂದಲಿವನ । ಹೆಡೆ ಮುಡಿಯ ಬಿಗಿದು ಕಟ್ಟೆ । ಓಡಿಹೋದರೆ ಶಿಕ್ಕ ಕೆಡ । ಗೇಡಿ ರಂಗನ ಬಿಡಬ್ಯಾಡಿ । ಕೆಡ । ಗೇಡಿ ಕೃಷ್ಣನ ಬಿಡಬ್ಯಾಡಿ ॥ ೨ ॥ ಯಾರು ಇಲ್ಲದ ವೇಳೆಯಲಿ । ದಾರಿಯ ನೋಡುತ್ತ ನಿವ ॥ ಸೂರೆ ಮಾಡುವ ಹಾಲು ಮೊಸರು । ಚೋರ ರಂಗನ ಬಿಡಬ್ಯಾಡಿರೆ । ಧೀರ ಕೃಷ್ಣನ ಬಿಡಬ್ಯಾಡಿರೆ ॥ ೩ ॥ ಗಂಡನಿಲ್ಲದ ವ್ಯಾಳೆ ನೋಡಿ । ಬಂಡು ಮಾಡಿ ಸೀರೆ ಕದ್ದು ॥ ಕೊಂಡು ಹಾಲು ಕೆನೆಯ ಕದ್ದ । ಲಂಡ ರಂಗನ ಬಿಡಬ್ಯಾಡಿರೆ । ಪುಂಡ ಕೃಷ್ಣನ ಬಿಡಬ್ಯಾಡಿರೆ ॥ ೪ ॥ ಕಾದುಕೊಂಡಿವ ಬಾಹೊ । ಹಾದಿಯ ನೋಡಿ ನಾ ದಣಿದೆ । ಆದುದೆಮ್ಮಯ ಕಾಮ ಸಾಧಿಸಿಕೊಂಬ । ಕ್ರೋಧ ಸಾಧಿಸಿಕೊಂಬ ॥ ೫ ॥ ಒರಳಿಲಿ ಕಟ್ಟಿಸಿಕೊಂಡು । ಒರಳ ಕೊಂಡೋಹು ವನಿಂಥ ॥ ದುರುಳ ಕೃಷ್ಣನ ಬಿಡಬ್ಯಾಡಿ । ಮರುಳು ಮಾಡಿ ಹೋದ ನಮ್ಮ । ಬಹು ಮೋಸ ಮಾಡಿ ಹೋದ ನಮ್ಮ ॥ ೬ ॥ ಇಂದಿನ ದಿನ

ಸುದಿನ । ಮಂದರಧರ ದೊರೆತ ಕಾರಣ ॥ ತಂದೆ ಪುರಂದರವಿಠಲನ್ನ ಅಪ್ಪಿಕೊಂಬ । ಸಂತೋಷದಿಂದ ಅಪ್ಪಿಕೊಂಬ ॥ ೭ ॥ ಶ್ರೀಃ ॥

## ೯. ರಾಗ ಹಿಂದುಸ್ಥಾನ್‌ದೇಶಿ, ರೂಪಕತಾಳ.

ಸಾಕು ಸಂಸಾರ ತೆರೆಯ ನೂಕಲಾರೆನು । ಬೇಕು ನಿನ್ನ ಚರಣ ಕಮಲ । ಬ್ಯಾರನ್ಯತ್ರ ಗತಿಯ ಕಾಣೆ ॥ ಪಲ್ಲ ॥ ಹುಟ್ಟಿದಂದಿನಿಂದ ಕಷ್ಟ । ಪಟ್ಟು ಕಂಗೆಟ್ಟು ಮನದಿ ಗುಟ್ಟು ಪೇಳ್ವೆನಯ್ಯ ಒಂ । ದಿಷ್ಟು ಲಾಲಿಸೊ ॥ ಕೊಟ್ಟ ಕಳತ ಕಣ್ಣು ನೆಲಕೆ । ತಟ್ಟಿದಲ್ಲದೆ ಬಿಡದು ಮೊರೆ । ಯಿಟ್ಟೆ ಕಾಯದಿರೆ ದೂರು । ಮುಟ್ಟುವದು ಶ್ರೀಲಕ್ಷ್ಮೀರಮಣ ॥ ೧ ॥ ತಂದೆ ತಾಯಿ ಬಂಧುಬಳಗ । ವೆಂದು ಪಾಶಕ್ಕೆ ಸಿಲ್ಕಿ । ಒಂದು ದಿನದ ಸುಖ ವನು । ಬಂದು ಕಾಣೆನೊ ॥ ಕಂದರ್ಪಜನಕ ನೀನು । ಕರುಣವಿಟ್ಟು ಕಾಯದೀರೆ ॥ ಕುಂದು ನಿಂದೆ ಬಂದರೆ ದೂರು । ತಂದು ಕೊಡುವರು ಲಕ್ಷ್ಮೀರಮಣ ॥ ೨ ॥ ತುಂಡು ತುತ್ತು ಕೂಳಿಗಾಗಿ । ಕಂಡವರ ಕಾಡಿ ಬೇಡಿ । ಹಿಂಡಿ ಹಿಪ್ಪಿಮಾಡಿ ವನವ । ಹೀನಗೊಳಿಸಿದೆ ॥ ಉಂಡು ಬಾರದ ಊಟವನ್ನು । ಕಾಣ ಬಾರದ ಕರ್ಮವನ್ನು । ಗುಂಡೆಗಾರರ ಕೇರಿಗೆ ಸಿಕ್ಕಿ । ಚೆಂಡಿಗಿಂತ ಹಗುರವಾದೆ ॥ ೩ ॥ ವಾಸಿಪಂಥಕಾಗಿ ಯೆನ್ನ । ಭಾಷೆಯನ್ನು ಜನರು ನೋಡಿ । ಆಶೆಮಾಡಿಕೊಂಡರೆ ನಿ । ರಾಶೆಯಾಯಿತೊ ॥ ಮೋಸದಿಂದ ಮಡುವ ಧುಮುಕಿ । ಈಸಲಾರೆ ಮುಳುಗಿ ಮುಳುಗಿ । ಘಾಸಿಯಾಗುತೇನೆ ಕೇಳು । ವಾಸುದೇವ ಸುಪ್ರಸನ್ನ ॥ ೪ ॥ ಇಷ್ಟು ದಿನದಿ ಜನರ ಕೈಯ । ನಿಷ್ಟುರಾದ ಮಾತಕೇಳಿ । ಕಷ್ಟಕಾಲ ಬಂತು ಘಳಿಗೆ । ಕಳೆಯಲಾರೆನು ॥ ಇಷ್ಟರ ಮೇಲಿನ್ನು ಮನಸು । ಎರಕ ವಿಲ್ಲದೆ ಕೇಳು । ಇಷ್ಟ ನೀನಹುದು ಪುರಂದರ । ವಿಠ್ಠಲ ನೀನಲ್ಲದಿಲ್ಲ ॥ ೫ ॥

## ೧೦. ರಾಗ ಯಮುನಾಕಲ್ಯಾಣಿ, ಏಕತಾಳ.

ಕಥಾಶ್ರವಣ ಮಾಡೋ । ಹರಿ ॥ ಪಥಾ ವೈಕುಂಠಕಿದು ನೋಡೊ । ಹರಿ । ಕಥಾಶ್ರವಣಮಾಡೊ ॥ ಪಲ್ಲ ॥ ಸರಸಿಜನಾಭನ ಸರ್ವದ ಪೊಗ ಳುತ । ದುರಿತ ದುಃಖಗಳೀಡಾಡೋ ॥ ೧ ॥ ಜ್ಞಾನಭಕುತಿ ವೈರಾಗ್ಯವೀವ

ಶ್ರೀವು । ದಾನಂದತೀರ್ಥರ ಪಾಡೋ ॥ ೨ ॥ ಪರಮ ಪುರುಷ ಶ್ರೀಪು ರಂದರವಿಠಲನ । ಚರಣಕಮಲವನ್ನು ಪಾಡೊ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೧. ರಾಗ ಕಾಂಬೋಧಿ, ಅಟತಾಳ.

ತಾಳಬೇಕು । ತಕ್ಕ । ಮೇಳಬೇಕು ॥ ಪಲ್ಲ ॥ ಗಳಶುದ್ಧಿ ಇರಬೇಕು । ತಿಳಿದು ಹೇಳಲು ಬೇಕು ॥ ಕಳವಳ ಬಿಡಬೇಕು । ಕಲಿಮೊಗ ಇರಬೇಕು ॥ ॥ ೧ ॥ ಯತಿಪ್ರಾಸು ಇರಬೇಕು । ಗತಿಗೆ ನಿಲ್ಲಿಸಬೇಕು ॥ ರತಿಪತಿಪಿತ ನೊಳು । ಅತಿ ಮೋಹವಿರಬೇಕು ॥ ೨ ॥ ಹರಿದಾಸನಾಗಲು ಬೇಕು । ಹರುಷವೆಚ್ಚಲು ಬೇಕು ॥ ಪುರಂದರವಿಠಲನಲ್ಲಿ । ಸ್ಥಿರಚಿತ್ತವಿರಬೇಕು ॥ ೩ ॥

## ೧೨. ರಾಗ ವಸಂತ, ರೂಪಕತಾಳ.

ರಾಮ ರಾಮ ರಾಮ ರಾಮ । ರಾಮ ಯೆನ್ನಿರೊ । ಸೀತಾ ॥ ಪಲ್ಲ ॥ ನೇಮದಿಂದ ಭಜಿಸುವವರ ಕಾಮಿತಗಳ ಕೊಡುವ ನಾಮ ॥ ಅನುಪಲ್ಲ ॥ ಕಲ್ಲಿನಂತೆ ಇರುವ ಜೀವ । ನಿಲ್ಲದಂತೆ ಮರಣವ್ಯಾಳಿ ॥ ಫುಲ್ಲನಾಭ ಕೃಷ್ಣ ನೆಂಬೊ । ಸೊಲ್ಲುಬಾಯಿಗೆ ಒದಗದೊ ॥ ೧ ॥ ವಾತಪಿತ್ಥವೆರಡು ಕೂಡಿ । ಶ್ಲೇಷ್ಮ ಬಂದು ಮೊದಗಿದಾಗ ॥ ಧಾತು ಕುಂದಿದಾಗ ರಘು । ನಾಥ ನೆಂದು ಒದಗದೊ ॥ ೨ ॥ ಇಹದಲ್ಲಿ ಇಷ್ಟ ಉಂಟು । ಪರದಲ್ಲಿ ಸುಖ ವುಂಟು ॥ ವರ ಪುರಂದರವಿಠಲನ್ನ । ಸ್ಮರಣೆ ಬಾಯಿಗೆ ಒದಗದೊ ॥ ೩ ॥

## ೧೩. ರಾಗ ಮುಖಾರಿ, ಝುಂಪೆತಾಳ.

ಏನು ಬರೆದಿಯೊ ಬ್ರಹ್ಮ ಇಂತು ನಿರ್ದಯನಾಗಿ ॥ ಪಲ್ಲ ॥ ಅಭಿ । ಮಾನ ವನು ತೊರೆದು ನಾ ಪರರ ಬೇಡುವದ ॥ ಅನುಪಲ್ಲ ॥ ಗೇಣೊಡಲು ಹೊರುವದಕೆ ಹೋಗಿ ಪರರನು ಪಂಚ । ಬಾಣ ಸಮರೂಪ ನೀನೆಂದು ಪೊಗಳಿ ॥ ಆಣೆ ನಿನ್ನಾಣೆ ನಾಳೆ ಬಾರೆಂದೆನಲು । ಗಾಣವನು ತಿರುಗುವಾ ಯೆತ್ತಿನಂತೆ ಬಳಲುವದ ॥ ೧ ॥ ಬಲ್ಲಿದವರ ಮನೆಯ ಬಾಗಿಲ ಕಾದು

ಬೇಸತ್ತು । ಸೊಲ್ಲು ಸೊಲ್ಲಿಗ ಆವರ ಕೊಂಡಾಡುತ ॥ ಇಲ್ಲ ಈ ವ್ಯಾಳೆ ಯಲಿ ನಾಳೆ ಬಾರೆಂದೆನಲು । ಹಲ್ಲಿಯನು ತಿಂದ ಇಲಿಯಂತೆ ಕೊರಗುವದ ॥ ೨ ॥ ಹಿಂದೆ ಬರದ ಬರಹ ಹ್ಯಾಗಾದರಾಗಲೀ । ಮುಂದೆನ್ನ ವಂಶದಲಿ ಜನಿಸುವವರ ॥ ಸಂದೇಹ ಬ್ಯಾಡ ಶ್ರೀಪುರಂದರವಿಠಲನೆ । ಕಂದರ್ಪ ಜನಕ ಉಡುಪಿಯ ಕೃಷ್ಣನಾಣೆ ॥ ೩ ॥ ಶ್ರೀಃ ॥

## ೧೪. ರಾಗ ನಾದನಾಮಕ್ರಿಯೆ, ಏಕತಾಳ.

ಗುದ್ದಿದವನೆ ಬಲ್ಲ । ಗುದ್ದಿಸಿಕೊಂಡವನೆ ಬಲ್ಲ । ಸುದ್ದಿಗೆ ಠಾವಿಲ್ಲ । ಬೌದ್ಧರಿ ಕೇಳಿರಿ ನೀವೆಲ್ಲ ॥ ಪಲ್ಲ ॥ ಜೀವದೊರಸೆ ಕೊಂದ । ಹವಣಿಸಿ । ನೆವಸದ ನುಂಗಿದ ॥ ಬಹು ಭಾಷೆಯ ಕಡಿದ । ಶಿವ ಶಿವ ತಾನಾಗೆ ಬಿರಿದ ॥ ೧ ॥ ಆರಿಗೆ ಮೊರೆಯಿಡಲಿ । ಹಿರಿದಭಿಮಾನಕ್ಕೆ ಸಡಲಿ ॥ ಭಾರವು ತಿರಿಗಿರಲಿ । ಕಾರಣ ಇದಿರಲಿ ಇರಲಿ ॥ ೨ ॥ ಕರ್ಮವು ಛೇದಿಸಿದ । ವೈರಕೆ ಗುರಿಯನೆಮಾಡಿದ ॥ ಧರ್ಮವ ಭಾವಿಸಿದ ಪುರಂ । ದರ ವಿಠಲನೆ ನಿಜಬುದ್ಧ ॥ ೩ ॥ ಶ್ರೀಃ ॥

## ೧೫. ರಾಗ ನಾದನಾಮಕ್ರಿಯೆ, ಅಟತಾಳ.

ಹೆಂಡತಿ । ಪ್ರಾಣ ಹಿಂಡುತಿ ॥ ಯೆನ್ನ । ಕೊಂಡ ಕೋತಿಯಂತೆ ಕುಣಿಸುತ್ತಾಡಿಸುತಿ ॥ ಪಲ್ಲ ॥ ಹೊತ್ತರೆ ಯೇಳುತಿ ಹೊರಗೆ ತಿರುಗ್ಯಾಡುತಿ । ಹೊತ್ತು ಹೋಯಿತು ಭತ್ತ ತಾ ಯೆನುತಿ ॥ ಉತ್ತಮ ಹಿರಿಯರ ಮಾತು ವಿಾರುತಿ । ಮೃತ್ಯು ದೇವತೆಯಂತೆ ಮನೆಯಲ್ಲಿ ಕುಳಿತಿ ॥ ೧ ॥ ಇಲ್ಲದ್ದು ಬೇಡುತಿ ಸುಳ್ಳು ಮಾತಾಡುತಿ । ಒಳ್ಳೆ ಊಟವನುಂಡು ಕುಳಿತೇನಂತೀ ॥ ಎಳ್ಳಷ್ಟು ಕೆಲಸವ ಮಾಡಲೊಲ್ಲೆನಂತಿ । ಎಲ್ಲಲ್ಲಿ ತಲೆಯೆತ್ತಧಾಂಗೆ ಮಾಡುತಿ ॥ ೨ ॥ ಹಿರಿಯತನಕೆ ಮನ ಗರುವಿಕೆ ಮಾಡುತಿ । ಪರಿವಾರದವರನೆಲ್ಲವ ಕಾಡುತಿ ॥ ಶಿರಿ ವರದಪುರಂದರವಿಠಲಗೆ ದೂರಾಗಿ । ದುರಿತಕ್ಕೆ ನೀ ಗುರಿಯಾಗಿ ನಿಲ್ಲುತ್ತಿ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

### ೧೬. ರಾಗ ಆನಂದಭೈರವಿ, ಅಟತಾಳ.

ಸುಮ್ಮನೆ ಬರುವದೆ ಮುಕ್ತಿ ॥ ಪಲ್ಲ ॥ ನಮ್ಮ। ಅಚ್ಯುತಾನಂತನ್ನ ನೆನೆಯದೆ ಭಕ್ತಿ ॥ ಅನುಪಲ್ಲ ॥ ಮನದಲ್ಲಿ ದೃಢವಿರಬೇಕು । ಪಾಪಿ। ಜನರ ಸಂಸರ್ಗವ ನೀಗಲು ಬೇಕು ॥ ಅನುಮಾನವನು ಬಿಡಬೇಕು । ನಮ್ಮ। ಮನವ ಶ್ರೀಹರಿಗೆ ಒಪ್ಪಿಸಿ ಕೊಡಬೇಕು ॥ ೧ ॥ ಕಾಮ ಕ್ರೋಧವ ಬಿಡಬೇಕು । ಹರಿ। ನಾಮ ಸಂಕೀರ್ತನೆಗಳ ಮಾಡಬೇಕು ॥ ಹೇಮದಾಶೆಯ ಬಿಡಬೇಕು । ನಮ್ಮ। ಕಮಲನಾಭನ ನೆರೆ ನಂಬಲು ಬೇಕು ॥ ೨ ॥ ಮಂದಮತಿಯ ಬಿಡಬೇಕು । ದೇಹ । ಬಾಂಧವ ಸಂದೇಹಗಳ ಬಿಡಬೇಕು ॥ ನಿಂದಿಸಿದವರೆ ಹಿಗ್ಗಬೇಕು । ಕೋಪ । ಬಂದರೆ ಸೈರಣೆಗಳ ತಾಳಬೇಕು ॥ ೩ ॥ ಹರಿಯೆ ಗುರುಯೆನ್ನಬೇಕು । ಅಂಥ । ಗುರುವೇ ಪರದೈವವೆಂತೆನ್ನಬೇಕು ॥ ಪರವಸ್ತು ಒಲ್ಲೆನೆನ್ನಬೇಕು । ದೇಹ। ಸ್ಥಿರವಲ್ಲ ಅಸ್ಥಿರವೆಂದು ತಿಳಿಯಬೇಕು ॥ ೪ ॥ ವ್ಯಾಪಾರವನು ಬಿಡಬೇಕು । ನಮ್ಮ। ಪುರಂದರವಿಠಲನ ನಂಬಲುಬೇಕು ॥ ಪಾಪರಹಿತನಾಗಬೇಕು । ಜ್ಞಾನ। ದೀಪದ ಬೆಳಕಿಲಿ ಓಡ್ಯಾಡಬೇಕು ॥ ೫ ॥ ಶ್ರೀಃ ॥

### ೧೭. ರಾಗ ಮುಖಾರಿ, ಝಂಪೆತಾಳ.

ಪ್ರಾಚೀನ ಕರ್ಮವು ಬಿಡಲರಿಯದು । ಯೋಚನೆಯ ಮಾಡಿ ನೀ ಬಳಲ ಬ್ಯಾಡ ॥ ಪಲ್ಲ ॥ ಮುನ್ನ ಮಾಡಿದ ಕರ್ಮ ಬೆನ್ನಟ್ಟಿ ಬರುತಿರಲು। ತನ್ನಿಂದ ತಾನೆ ತಿಳಿಯಲರಿಯದೆ ॥ ಇನ್ನು ದೇಹವನು ಆಶ್ರೈಸಿ ಫಲವೇನು । ಉನ್ನಂತ ಹರುಷದಲಿ ಮನದಿ ಯೋಚಿಸುವಾ ॥ ೧ ॥ ಲೋಕಾದಿ ಲೋಕಗಳ ತಿರುಗುವ ರವಿರಥಕೆ । ಯೇಕಗಾಲಿಗೆ ಯೇಳು ಕುದುರೆ ಕಟ್ಟಿ । ಆಕಾಶ ಮಾರ್ಗದಲಿ ತಿರುಗುವ ಅರುಣನಿಗೆ । ಬೇಕಾದ ಚರಣಗಳು ಕೊಡಲಿಲ್ಲ ಹರಿಯು ॥ ೨ ॥ ಸೇತುವೆಯ ಕಟ್ಟಿ ಲಂಕೆಗೆ ಹಾರಿ ಹನುಮಂತ । ಖ್ಯಾತಿಯನೆ ಮಾಡಿ ರಾವಣನ ಗೆದ್ದು । ಸೀತೆಯನು ತಂದು ಶ್ರೀರಾಮನಿಗೆ ಕೊಡಲಾಗಿ। ಪ್ರೀತಿಯಿಂ ಕೌಪೀನವ ಬಿಡಿಸಲಿಲ್ಲ ಹರಿಯು ॥ ೩ ॥ ನಿತ್ಯದಲಿ ಗರುಡ ಸೇವೆಯ ಮಾಡಿ ವಿಷ್ಣುವಿನ।

ಹೊತ್ತುಕೊಂಡು ಇದ್ದ ಜಗವರಿಯಲು ॥ ಅತ್ಯಂತ ಸೇವಕನೆಂದು ಮೂಗಿನ ಡೊಂಕು । ಯೆತ್ತಿ ನೆಟ್ಟಗೆ ಮಾಡಲಿಲ್ಲ ಶ್ರೀಕೃಷ್ಣ ॥ ೪ ॥ ಇಂತೆಂದು ಈ ಪರಿ ತಮ್ಮೊಳಗೆ ತಾವು ತಿಳಿದು । ಭ್ರಾಂತನಾಗದೆ ಬಯಕೆಗಳನು ಜರಿದು ॥ ಶಾಂತ ಮೂರುತಿ ಶಿರಿ ಪುರಂದರವಿಠಲನ । ಸಂತತದಿ ಬಿಡದೆ ಭಜಿಸೆಲವೊ ಮನುಜ ॥ ೫ ॥ ಶ್ರೀಃ ॥

## ೧೮. ರಾಗ ಕಾಂಬೋಧಿ, ಝಂಪೆತಾಳ.

ಹರಿ ಹರರು ಸಮರೆಂದು ಅರಿಯದಜ್ಞಾನಿಗಳು । ಹರನ ಹೃದಯದೊಳಿರುವ ಹರಿಯು ತಾವರಿಯರು ॥ ಪಲ್ಲ ॥ ಶರಧಿ ಮಥನದೊಳಂದು ಸಿಂಧುಸುತೆ ಬಂದಾಗ । ಹರಿಹರ ವಿರಿಂಚಿ ಮೊದಲಾದ ಸುರರ ॥ ವರರಾರೆಂದು ನೋಡಿ ಶಂಕೆಯ ಬಿಟ್ಟು ಶಿರಿದೇವಿ । ಹರಿ ಸರ್ವವರನೆಂದು ಮಾಲೆ ಹಾಕಿದಳು ॥ ೧ ॥ ಹರಿನಾಮ ಕ್ಷೀರವನು ಹರನಾಮ ನೀರನು । ಕ್ಷೀರ ನೀರೊಂದಾದುದಂತೆ ಇಹದು ಪರರು ॥ ಪರತತ್ವವರಿಯದ ನರ ತಾನು ಹರಿ ಹರರು । ಸರಿಯೆಂದು ನರಕಕೆ ಒಳಗಾಗುತಿಹನು ॥ ೨ ॥ ಕ್ಷೋಣಿಯೊಳು ಬಾಣನಾ ತೋಳುಗಳ ಕಡಿವಾಗ । ಏಣಾಂಕಧರ ಬಾಗಿಲೊಳಗೆ ಇರಲು ॥ ಕಾಣಿಪರೆ ಜನರೆಲ್ಲ ಹರಿಪರನು ತಾನೆಂದು । ಗುಣಪೂರ್ಣ ಪುರಂದರವಿಠಲನು ಪರನು ॥ ೩ ॥ ಶ್ರೀಃ ॥

## ೧೯. ರಾಗ ಮಧ್ಯಮಾವತಿ, ಮಟ್ಟೆತಾಳ.

ಕಬ್ಬು ಡೊಂಕಾದರೆ ಶೀಯು ಡೊಂಕೆ ವಿಠಲಾ ॥ ಪಲ್ಲ ॥ ನಾ ಡೊಂಕಾದರೆ ನಿನ್ನ ನಾಮ ಡೊಂಕೆ ವಿಠಲಾ ॥ ಅನುಪಲ್ಲ ॥ ಧೇನು ಡೊಂಕಾದರೆ ಕ್ಷೀರ ಡೊಂಕೆ ವಿಠಲಾ । ನಾ ಡೊಂಕಾದರೆ ॥ ೧ ॥ ನದಿಯು ಡೊಂಕಾದರೆ ಉದಕ ಡೊಂಕೆ ವಿಠಲಾ । ನಾ ಡೊಂಕಾದರೆ ॥ ೨ ॥ ಕುಸುಮ ಡೊಂಕಾದರೆ ವಾಸನೆ ಡೊಂಕೆ ವಿಠಲಾ । ನಾ ಡೊಂಕಾದರೆ ॥ ೩ ॥ ಬಿಲ್ಲು ಡೊಂಕಾದರೆ ಬಾಣ ಡೊಂಕೆ ವಿಠಲಾ । ನಾ ಡೊಂಕಾದರೆ ॥ ೪ ॥ ವೇಲಾಪುರದ ಚೊಕ್ಕ ಪುರಂದರವಿಠಲ ನಾ । ಹೊಲೆಯನಾದರೆ ನಿನ್ನ ನಾಮ ಹೊಲೆಯೆ ವಿಠಲಾ ॥ ೫ ॥ ಶ್ರೀಃ ॥

## ೨೦. ರಾಗ ಕಾಪಿ, ಏಕತಾಳ.

ಬೈಯಿರೋ ಬೈಯಿರೋ । ಮನಮುಟ್ಟಿ ಬೈಯಿರೋ ॥ ಪಲ್ಲ ॥ ಚೆನ್ನಾಗಿ ಬೈದೆನ್ನ ಧನ್ಯನ ಮಾಡಿರೋ ॥ ಅನುಪಲ್ಲ ॥ ಅವರು ಇವರು ಬೈದರೆಂಬೊ । ಹೀನ ಬುದ್ಧಿ ನನಗಿಲ್ಲ ॥ ನಾ ಮಾಡಿದಷ್ಟು ಪಾಪವನ್ನು । ಅಳದು ಹಾಕಿ ಹಂಚಿಕೊಳ್ಳಿರೊ ॥ ೧ ॥ ಇರುವೆ ನೊಣ ಕೊಂದ ಪಾಪ । ಪರನಿಂದ್ಯವ ಮಾಡಿದ ಪಾಪ ॥ ಹೊಲೆಯ ಪಾಪ ಕೆಲವು ಉಂಟು । ಅಳೆದು ಹಾಕಿ ಹಂಚಿಕೊಳ್ಳಿರೊ ॥ ೨ ॥ ಅತ್ತೆ ಮಾವನ ಬೈದ ಪಾಪ । ಮತ್ತೆ ಹಿರಿಯರ ನುಡಿದ ಪಾಪ ॥ ಕರ್ತು ಶ್ರೀಪುರಂದರವಿಠಲನ್ನ । ಚಿತ್ತದಲ್ಲಿ ನೆನೆಯದ ಪಾಪ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೨೧. ರಾಗ ಮೋಹನ, ಝಂಪೆತಾಳ.

ಅಜ್ಞಾನಿಗಳ ಕೂಡೆ ಅಧಿಕ ಸ್ನೇಹದಕಿಂತ । ಸುಜ್ಞಾನಿಗಳ ಕೂಡೆ ಜಗಳವೆ ಲೇಸು ॥ ಪಲ್ಲ ॥ ಉಂಬುಡುವುದಕ್ಕಿರದ ಅರಸನೋಲಗಕಿಂತ । ತುಂಬಿದೂರೊಳಗೆ ತಿರಿದುಂಬುವದೇ ಲೇಸು ॥ ಹಂಬಲಿಸಿ ಹಾಳು ಹರಟೆಗಳ ಹರಟೇಗಿಂತ । ನಂಬಿ ಹರಿದಾಸರೊಳು ಪೊಂದುವದೆ ಲೇಸು ॥ ೧ ॥ ಒಡನೆ ಹಂಗಿಸುವವನ ಪಾಲೋಗರದಕಿಂತ । ಕುಡಿ ನೀರು ಕುಡಿದು ಕೊಂಡಿರುವದೇ ಲೇಸು ॥ ಕಡು ಕುಹಕನೊಡನೆ ಸಂಗವನು ಮಾಡುವದಕಿಂತ । ಅಡವಿಯೊಳಜ್ಞಾತವಾಸವೇ ಲೇಸು ॥ ೨ ॥ ಮಸದು ಮತ್ಸರಿಪ ಸತಿಯೊಡನೆ ಸಂಸಾರಕಿಂತ । ಹಸನಿಲ್ಲದ ಹಾಳು ಗುಡಿಯೆ ಲೇಸು ॥ ಎಸೆದು ಭಜಿಸಲು ನಮ್ಮ ಪುರಂದರವಿಠಲನ್ನ । ವಶವಹಗೆ ಮುಕ್ತಿಯು ವಶವಹುದೆ ಕೇಳಿ ॥ ೩ ॥ ಶ್ರೀಃ ॥

## ೨೨. ರಾಗ ಬಿಲಹರಿ, ಆದಿತಾಳ.

ಬಾರವ್ವ ಭಾಗೀರಥಿ ತೋರವ್ವ ಜನರಿಗೆ ॥ ಪಲ್ಲ ॥ ನಾ ಸ್ನಾನಮಾಡುವದು ತೋರವ್ವ ಜನರಿಗೆ ॥ ಅನುಪಲ್ಲ ॥ ವ್ಯಾಸಮುನಿರಾಯರು ಬಂದು

ಭೋಜನಕ್ಕೆ ಕರೆಯಲು । ತ್ವರಿತದಿಂದಲಿ ಬಂದು ಪಾತ್ರದಲ್ಲಿ ಕುಳಿತೆ ॥ ॥ ೧ ॥ ದಾಸರ ನುಡಿ ಕೇಳಿ ಲೇಸಾಗಿ ತಾ ಬಂದು । ಗ್ರಾಸಗೊಂಬುವ ಜನರ ಪಾತ್ರದಲ್ಲಿ ಪರಿಯಲು ॥ ೨ ॥ ಈ ಮಹಿಮೆಯ ನೋಡಿ ಗುರು ವ್ಯಾಸರಾಯರು । ಶ್ರೀಪತಿ ಪುರಂದರವಿಠಲನ ಕಂಡಂಥ ॥ ೧ ॥ ಶ್ರೀಃ ॥

## ೨೩. ರಾಗ ವರಾಳಿ, ಅಟತಾಳ.

ಎಂದಿಗೆ ಧನ್ಯನಹೆ ॥ ಪಲ್ಲ ॥ ಎಂದಿಗೆ ಧನ್ಯ ನಾ ಯೆಂದಿಗೆ ಪುಣ್ಯ ಜೀವಿ । ಯೆಂದಿಗೆ ನಿನ್ನ ಚಿತ್ತಕೆ ಬಾಹೊದಚ್ಯುತನೆ ॥ ಅನುಪಲ್ಲ ॥ ಫಲ ಮರ ಗಿಡ ಬಳ್ಳಿ ಕುಲದಲಿಪತ್ತು ಲಕ್ಷ್ಯ । ಜಲದಲ್ಲಿ ಒಂಭತ್ತು ಲಕ್ಷ ಜೀವಿಸಿ ॥ ಸುಳಿದೆ ನಾನೇಕ ದಶಲಕ್ಷ ಕ್ರಿಮಿಯಾಗಿ । ತೊಳಲಿದೆನು ಅಂಡಜದೊಳು ದಶಲಕ್ಷ ॥ ೧ ॥ ಚರಣ ನಾಲ್ಕರಲ್ಲಿ ಮೂವತ್ತು ಲಕ್ಷ ಜೀವಿಸಿ । ನರನಾಗಿ ಸೇರಿದೆ ನಾಲ್ಕು ಲಕ್ಷ ॥ ಪರಿಭವದೊಳು ಬಂದು ಹೊಂದಿದೆನಯ್ಯ ನಿನ್ನ । ಸರಸಿಜಭವನಾ ಶತಕಾಲಕಾಗಿ ॥ ೨ ॥ ಎಂಭತ್ತು ನಾಲ್ಕು ಲಕ್ಷ ಯೋನಿಯೊಳು । ಅಂಬುಜನಾಭನೆ ನಿನ್ನ ಲೀಲೆಗಾಗಿ ॥ ಕುಂಭಿನಿ ಅರಿಯಲು ನೊಂದೆನಯ್ಯ ಸ್ವಾಮಿ । ಕಂಬುಕಂಧರ ಸಿರಿಪುರಂದರವಿಠ್ಠಲ್ಲ ॥ ೩ ॥

## ೨೪. ರಾಗ ಕೇತಾರಗೌಳ, ಅಟತಾಳ.

ಮನವ ನಿಲಿಸುವದು ಬಲು ಕಷ್ಟ ॥ ಪಲ್ಲ ॥ ಹರಿದಾಡುವಂಥ ॥ ಅನುಪಲ್ಲ ॥ ಕಾಶಿಗ್ಹೋಗಲು ಬಹುದು । ದೇಶ ತಿರುಗಲು ಬಹುದು । ಆಶೆ ಬಿಟ್ಟಂತೆ ಇರಬಹುದು ॥ ೧ ॥ ಜಪವ ಮಾಡಲು ಬಹುದು । ತಪವ ಮಾಡಬಹುದು । ಉಪವಾಸ ವ್ರತದಲ್ಲಿರಬಹುದು ॥ ೨ ॥ ಸ್ನಾನ ಮಾಡಲು ಬಹುದು । ದಾನಾವ ಕೊಡಲು ಬಹುದು । ಧ್ಯಾನಾದಿ ಪುರಂದರವಿಠಲ ಚರಣದಲ್ಲಿ ॥ ೩ ॥ ಶ್ರೀಃ ॥

## ೨೫. ರಾಗ ಶ್ರೀರಂಜಿನಿ, ಅಟತಾಳ.

ಶ್ರೀನಿವಾಸ ಯೆನ್ನ ಬಿಟ್ಟು ನೀನಗಲದೆ ॥ ಪಲ್ಲ ॥ ಮನವೆಂಬೊ ಮಂಟಪ । ತನುವೆಂಬೊ ಹಾಸು ಮಂಚ ॥ ಜ್ಞಾನವೆಂಬೊ ದಿವ್ಯ ದೀಪದ

ಬೆಳಕಿಲಿ । ಸನಕಾದಿ ವಂದ್ಯ ನೀ ಬೇಗ ಬಾರೋ ॥ ೧ ॥ ಪಂಚದೈವರು ಯಾವಾಗಲು ಯೆನ್ನ । ಹೊಂಚುಹಾಕಿ ನೋಡುತಾರೆ ॥ ಕೊಂಚಗಾರರು ಆರು ಮಂದಿ ಅವ । ಡಿಂಚು ಮುಂಚಿಲ್ಲದೆ ಯೆಳೆಯುತಾರೆ ॥ ೨ ॥ ಮುನ್ನ ಮಾಡಿದ ದುಷ್ಕರ್ಮದಿ ಬಳಲಿದೆ । ಇನ್ನಾದರು ಯೆನ್ನ ಕೈಪಿಡಿಯೋ ॥ ಘನ್ನ ಮಹಿಮ ಶ್ರೀಪುರಂದರವಿಠಲ । ಮನ್ನಿಸಿ ಯೆನ್ನನು ಕಾಯಬೇಕೊ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೨೬. ರಾಗ ಹಿಂದುಸ್ಥಾನ್‌ದೇಶಿ, ರೂಪಕತಾಳ.

ಏನನಿತ್ತು ಮೆಚ್ಚಿಸುವೆನೊ । ಏನೋ ವಿಠ್ಠಲಾ ॥ ಪಲ್ಲ ॥ ದೀನ ರಕ್ಷಕನೆ ನಿನ್ನ । ಧ್ಯಾನವ ಕೊಡು ವಿಠ್ಠಲೈಯ್ಯ ॥ ಅನುಪಲ್ಲ ॥ ಓದಿ ನಿನ್ನ ಮೆಚ್ಚಿಸುವೆನೆ । ವೇದವ ಅಜನಿಗಿತ್ತೆ ॥ ವಾದಿಸಿ ನಿನ್ನ ಮೆಚ್ಚಿಸುವೆನೆ । ಆದಿ ಶೇಷಶಯನನೆ ॥ ೧ ॥ ಪಾಡಿ ನಿನ್ನ ಮೆಚ್ಚಿಸುವೆನೆ । ಪವನಜಸ್ವಾಮಿ ನೀನೆ ॥ ಆಡಿಸಿ ನಿನ್ನ ಮೆಚ್ಚಿಸುವೆನೆ । ಹರನೈಯನೈಯನೆ ॥ ೨ ॥ ಚಿನ್ನವಿತ್ತು ಮೆಚ್ಚಿಸುವೆನೆ । ಶಿರಿದೇವಿಯರಸನೆ ॥ ಪೂರ್ಣಾನಂದ ಸ್ವಾಮಿ ನೀನೆ । ಪುರಂದರವಿಠ್ಠಲಯ್ಯ ॥ ೩ ॥ ಶ್ರೀಃ ॥

೨೭. ರಾಗ ಸೌರಾಷ್ಟ್ರ, ಅಟತಾಳ.

ಎಚ್ಚರಿಕೆ ಭಾಗ್ಯ ಯಾರಿಗೂ ಸ್ಥಿರವಲ್ಲ । ನಿಶ್ಚಯವೆಚ್ಚರಿಕೆ ॥ ಪಲ್ಲ ॥ ಹೆಚ್ಚದೆ ಹಿಗ್ಗದೆ ಇದ್ದರೆ ಲೋಕಕ್ಕೆ ಮೆಚ್ಚು ಕೇಳೆಚ್ಚರಿಕೆ ॥ ಅನುಪಲ್ಲ ॥ ದೊರೆಗಳ ಒಲುಮೆ ಉಂಟೆಂದೆಲ್ಲರೊಳು ಹಗೆ । ತರವಲ್ಲ ಎಚ್ಚರಿಕೆ ॥ ಕರವ ಮುಗಿದು ಸಜ್ಜನರಿಗೆ ಶಿರಬಾಗಿ । ನಡೆವೋದು ಎಚ್ಚರಿಕೆ ॥ ೧ ॥ ಸಿರಿಯೆಂಬ ಸೊಡರಿಗೆ ಮಾನಾಭಿಮಾನಾದ । ಬಿರುಘಾಳಿ ಎಚ್ಚರಿಕೆ ॥ ಧರೆಯೊಳು (ನಗೇನು) ಸ್ಥಿರವೆಂದು ಗರ್ವದೊಳ್ನಡೆಯದೆ । ಇರುವದು ಎಚ್ಚರಿಕೆ ॥ ೨ ॥ ಕೊಡನ ಅಂಧಕ ಹೊತ್ತು ನಡೆವ ಧಿಕ್ಕಾರದಿ । ನಡೆ ತಪ್ಪು ಯೆಚ್ಚರಿಕೆ ॥ ಬಡವಾರೆಡರ ಕೇಳದೆ ಮುಂದಕೆ ಹೆಜ್ಜೆ । ಇಡಬೇಡವೆಚ್ಚರಿಕೆ ॥ ೩ ॥ ಲೋಕಪವಾದಕ್ಕೆ ಅಂಜಿ ನಡವುದು ವಿ । ವೇಕ ಕೇಳೆ

ಚ್ಚರಿಕೆ ॥ ನಾಕೇಶನಾದರು ಬಿಡದಪವಾದ ಪ । ರಾಕು ಕೇಳೆಚ್ಚರಿಕೆ ॥ ೪ ॥ ಕಾಕು ಮನುಜರ ಚಾಡಿ ಕೇಳಿ ಕೋಪೋ । ದ್ರೇಕ ಬೇಡೆಚ್ಚರಿಕೆ ॥ ಭೂಕಾಂತೆ ನಡನಡುಗುವಳು ನಿಷ್ಠುರದ । ವಾಕು ಬೇಡೆಚ್ಚರಿಕೆ ॥ ೫ ॥ ನಳ ಮಾಂಧಾತರೇನಾದರೆಂಬುದ ನೀ । ತಿಳಿದು ನೋಡೆಚ್ಚರಿಕೆ । ಅಳಿವುದು ಕಾಯವು ಉಳಿವುದು ಕೀರ್ತಿಯು । ಯಿಳೆಯೊಳು ಎಚ್ಚರಿಕೆ ॥ ೬ ॥ ಬಳಲಿಸಿ ಪರರನ್ನು ಘಳಿಸಿದಂಥ ಹೊನ್ನು । ಉಳಿಯದು ಎಚ್ಚರಿಕೆ ॥ ಉಳಿವಲ್ಪಕಾಲಕೆ ಬಡವರಾದವರನು । ಪಳಿಯದಿರೆಚ್ಚರಿಕೆ ॥ ೭ ॥ ಪರಧನ ಪರಸತಿಗಳು ಕಲು ಸಿರಿ ಮೊಗ । ತಿರುಗುವಳೆಚ್ಚರಿಕೆ ॥ ಬರುವ ಹಾನಿ ವೃದ್ಧಿ ತನ್ನ ಕಾಲ ವಿಚಾರ । ಅರಿಯದು ಎಚ್ಚರಿಕೆ ॥ ೮ ॥ ಬಲ್ಲಿದ ನೀನೆಂದು ಬಡವರ ಬಾಯನು । ಹೊಯ್ಯಬೇಡೆಚ್ಚರಿಕೆ ॥ ಎಳ್ಳಷ್ಟು ತಪ್ಪಲು ಯಮನವರು ನರಕ । ಕೆಳದೊಯ್ವರೆಚ್ಚರಿಕೆ ॥ ೯ ॥ ವರಛಿದ್ರ ಕುಂಭದುದಕದಂತಾಯುಷ್ಯ । ಸರಿಯುವುದೆಚ್ಚರಿಕೆ ॥ ವರದಪುರಂದರ ವಿಠಲನ ಸ್ಮರಣೆಯ । ಮರೆಯಬೇಡೆಚ್ಚರಿಕೆ ॥ ೧೦ ॥ ಶ್ರೀಃ ।

## ೨೮. ರಾಗ (ಮುಸಲ್ಮಾನಿ) ಗಮನಶ್ರಮ, ಏಕತಾಳ.

ಕಾಗದ ಬಂದಿದೆ । ನಮ್ಮ । ಕಮಲನಾಭನದು । ಈ । ಕಾಗದವನ್ನು ಓದಿಕೊಂಡು । ಕಾಲವ ಕಳೆಯಿರೋ ॥ ಪಲ್ಲ ॥ ಕಾಮ ಕ್ರೋಧವ ಬಿಡಿರೆಂಬೊ । ಕಾಗದ ಬಂದಿದೆ । ನೇಮನಿಷ್ಠೆಯೊಳಿರಿರೆಂಬೊ । ಕಾಗದ ಬಂದಿದೆ ॥ ತಾಮಸ ಜನರ ಕೂಡದಿರೆಂಬೊ । ಕಾಗದ ಬಂದಿದೆ । ನಮ್ಮ । ಕಾಮಾನಯ್ಯನು ತಾನೆ ಬರದ । ಕಾಗದ ಬಂದಿದೆ ॥ ೧ ॥ ಹೆಣ್ಣಿನಾಸೆ ಬಿಡಿರೆಂಬೊ । ಕಾಗದ ಬಂದಿದೆ । ಹೊನ್ನಿನಾಸೆ ಬಿಡಿರೆಂಬೊ । ಕಾಗದ ಬಂದಿದೆ ॥ ಮಣ್ಣಿನಾಸೆ ಬಿಡಿರೆಂಬೊ । ಕಾಗದ ಬಂದಿದೆ । ನಮ್ಮ । ಕಮಲನಾಭನು ತಾನೆ ಬರದ । ಕಾಗದ ಬಂದಿದೆ ॥ ೨ ॥ ಗೆಜ್ಜೆ ಕಾಲ್ಕಟ್ಟಿರೆಂಬೊ । ಕಾಗದ ಬಂದಿದೆ । ಹೆಜ್ಜೆ ಹೆಜ್ಜೆಗೆ ಹರಿಯೆನ್ನಿರೆಂಬೊ । ಕಾಗದ ಬಂದಿದೆ ॥ ಲಜ್ಜೆಬಿಟ್ಟು ಕುಣಿಯಿರೆಂಬೊ । ಕಾಗದ ಬಂದಿದೆ । ನಮ್ಮ । ಪುರಂದರವಿಠ್ಠಲ ತಾನೆ ಬರದ । ಕಾಗದ ಬಂದಿದೆ ॥ ೩ ॥ ಶ್ರೀಃ ॥

## ೨೯. ರಾಗ ನಾಟಿ, ಝಂಪೆತಾಳ.

ಭಳಿ ಭಳಿರೆ ಎನ್ನ ಸುಖವೆಂಬುದೇ ಸುಖವು । ಕಲಿಕಾಲಕಿದಕಿರಲೋ ಕಾವೇರಿ ರಂಗನೆ ॥ ಪಲ್ಲ ॥ ತಂದೆ ನೀನೆ ಕೃಷ್ಣ ತಾಯಿ ಇಂದಿರಾದೇವಿ । ಮಂದಜಾಸನ ಯೆನಗೆ ಹಿರಿಯಣ್ಣನು ॥ ಇಂದುಮುಖಿ ಶ್ರೀಸರಸ್ವತಿದೇವಿಯತ್ತಿಗೆಯು । ಎಂದೆಂದಿಗೂ ವಾಯುದೇವರೇ ಗುರುವು ॥ ೧ ॥ ಗುರುಪತ್ನಿ ಶ್ರೀಭಾರತಿಯು ನೋಡೆ ಮೇಲಾಗಿ । ಗರುಡಾಹಿ ರುದ್ರರಣ್ಣನ ಮಕ್ಕಳು ॥ ಸುರರು ಸನಕಾದಿಗಳು ಪರಮ ಬಾಂಧವರೆನಗೆ । ಸ್ಥಿರವಾದ ವೈಕುಂಠವೆನಗೆ ಮಂದಿರವು ॥ ೨ ॥ ನಿನ್ನ ಪಾದಾಂಬುರುಹ ಭಜಿಸುವುದೆ ಸೌಭಾಗ್ಯ । ನಿನ್ನ ನಿರ್ಮಾಲ್ಯಗಳೆ ಭೋಗ ದ್ರವ್ಯ ॥ ನಿನ್ನ ಕಥೆ ಕೇಳುವುದು ಮಂಗಳ ಸುವಾದ್ಯಗಳು । ನಿನ್ನಂಥ ಅರಸೆನಗೆ ಪುರಂದರವಿಠಲ ॥ ೩ ॥

## ೩೦. ರಾಗ ನಾಟಿಕುರಂಜಿ, ಅಟತಾಳ.

ಎಂಥಾ ಸಣ್ಣವನೆ । ನಿನ್ನ ಮಗ । ನೆಂಥಾ ಸಣ್ಣವನೆ ॥ ಪಲ್ಲ ॥ ಎಂಥ ಸಣ್ಣವನಿವನಂಥವರಿಲ್ಲವು । ಹೊಂತಕಾರಿ ಬಲವಂತರಿಗಧಿಕನು ॥ ಅನುಪಲ್ಲ ॥ ತರಳರಂತಿಪ್ಪನು ತರುಣೀರೊಳಾಡುವ । ಕಿರಿಬೆರಳುಗುರಿನಲಿ ಗಿರಿಯನೆತ್ತಿದವ ॥ ೧ ॥ ಕಾಳಿಂಗ ಸರ್ಪನ ಕಾಲಿಲಿ ತುಳಿದವ । ಪಾಲಾಯನವ ಮಾಡಿ ಕಾಲಯಮನ ಸುಟ್ಟ ॥ ೨ ॥ ನಿಚ್ಚ ಪಾವನವಮಾಡಿ ಆಶ್ಚರ್ಯ ತೋರಿದ ಯಂ । ದಚ್ಚು ಮಾಡುವಿರೆಂದು ಮುಚ್ಚಿಕೊಂಬೆಲ್ಲನೀ ॥ ೩ ॥ ಬಾಯಿತೆರದನಲ್ಲೆ ನೀನಂಜುವಂದದಿ । ಆ ಯಮಳಾರ್ಜುನರಾಯನ ಬಿಡಿಸಿದ ॥ ೪ ॥ ದಿಟ್ಟತನದಿ ಮೊಲೆ ಕೊಟ್ಟವಳನು ಕೊಂದ । ಕೃಷ್ಣ ಪುರಂದರವಿಠ್ಠಲರಾಯನು । ಎಂಥಾ ಸಣ್ಣವನೆ ॥ ೫ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೩೧. ರಾಗ ಮೋಹನ, ಅಟತಾಳ.

ನಾರಾಯಣ ಯೆಂಬ ನಾಮದ ಬೀಜವ । ನಾಲಿಗೆ ತುದಿಯಿಂದ ಬಿತ್ತಿರಯ್ಯ ॥ ಪಲ್ಲ ॥ ಹೃದಯ ಹೊಲವ ಮಾಡಿ ಮನವ ನೇಗಿಲ ಮಾಡಿ ।

ಶ್ವಾಸ ಉಚ್ಛ್ವಾಸ ಯೆರಡೆತ್ತು ಮಾಡಿ । ಜ್ಞಾನವೆಂಬೊ ಹಗ್ಗ ಕಣ್ಣೆ ಮಣಿಯು ಮಾಡಿ । ಹೃದಯವೆಂಬ ಗುಂಟೇಲಿ ಹರವಿರಯ್ಯ ॥ ೧ ॥ ಮದ ಮತ್ಸರವೆಂಬೊ ಮರಗಳನೆ ತರಿದು । ಕಾಮ ಕ್ರೋಧವೆಂಬೊ ಕಳೆಯು ಕಿತ್ತು ॥ ಪಂಚೇಂದ್ರಿಯವೆಂಬೊ ಮಂಚಿಕೆಯನೆ ಹಾಕಿ । ಚಂಚಲ ವೆಂಬೊ ಹಕ್ಕಿಯ ಹೊಡೆದೋಡಿಸಿರಯ್ಯ ॥ ೨ ॥ ಉದಯಾಸ್ತಮಾನ ವೆಂಬೊ ಎರಡು ಕೊಳಗದಲ್ಲಿ । ಆಯುಷ್ಯವೆಂಬೊ ರಾಶಿ ಅಳೆಯುತಿದೆ ॥ ಸ್ವಾಮಿ ಪುರಂದರವಿಠಲನ್ನ ನೆನದರೆ । ಪಾಪದ ರಾಶಿಯು ಪರಿಹರಿಸುವ ನಯ್ಯ ॥ ೩ ॥ ಶ್ರೀಃ ॥

### ೩೨. ರಾಗ ವಸಂತಭೈರವಿ, ಆದಿತಾಳ.

ಗೋಕುಲದಲಿ ನಾನಿರಲಾರೆ । ಗೋಪ್ಯಮ್ಮ ಕೇಳೆ । ಪಲ್ಲ ॥ ಹಾಲು ಮೊಸರು ನಾವಲ್ಲೆಂಬೆ । ಭರದಿಂದಲಿ ಬಂದು ಕಾಲಲಿ ಬಿದ್ದು ಕುಡಿಸು ವರು ॥ ಅನುಪಲ್ಲ ॥ ತನುವಿಗೆ ಬಲವೆಂದು ಬೆಳೆಯಬೇಕೆಂದು । ಒಳಕ ಳುಹುತ ಕಳವಿನಿಕ್ಕಿಲಿ ಮಗುವು ಒಳಗಿನ ಗುಟ್ಟು । ಬೈಲಮಾಡಿ ನಮ್ಮ ಕದವನಿತ್ತೆ ಯೆನ್ನ ಬೇಡಲಿಸುತ್ತಾರೆ ॥ ೧ ॥ ಮಂದಗಮನೇರು ತಾವು ಬಂದು ಕೈಹಿಡಿದುಕೊಂಡು । ಬಾ ಗೋವಿಂದನೆಂದು ಕರೆದು ಸದನದೊ ಳಗೆ ॥ ಮಿಂದು ಹಾಸಿಗೆ ಹಾಸಿ ನಮ್ಮ ಅಧರವ ಸವಿದು । ಅವರ ಅಧರ ಧರಕ್ಕೆ ನಾ ಗಡಗಡ ನಡುಗಿದೆ ॥ ೨ ॥ ತಮ್ಮ ಪುರುಷರ ಪ್ರೀತಿ ಬಿಟ್ಟು ಚೆನ್ನಾಗಿ ಯೆನ್ನ । ಬೆನ್ನಗೊಂಡರು ಹಗಲು ಇರುಳು ॥ ರತಿದೇವಿ ಕೃತಿ ಅತಿಶಯ ದುಃಖಕ್ಕೆ । ರತಿಪತಿಶರದೆ ವ್ರತದೊಳಗೆ ಪುರಂದರವಿಠಲ ನಲ್ಲದೆ ॥ ೩ ॥ ಶ್ರೀಃ ॥

### ೩೩. ರಾಗ ಕಾಪಿ, ಆದಿತಾಳ.

ಎಂಥಾ ಚೆಲುವಗೆ ಮಗಳನೆ ಕೊಟ್ಟಾ । ಗಿರಿರಾಜನ ನೋಡಮ್ಮಮ್ಮ ॥ ॥ ಪಲ್ಲ ॥ ಕಂತುಹರ ಶಿವ ಚೆಲುವನೆಂದು । ಮೆಚ್ಚಿದನು ನೋಡಮ್ಮಮ್ಮ ॥ ॥ ಅನುಪಲ್ಲ ॥ ಮೋರೆ ಐದು ಮೂರು ಕಣ್ಣು । ವಿಪರೀತವ ನೋಡ ಮ್ಮಮ್ಮ ॥ ಕೊರಳಲಿ ರುಂಡಮಾಲೆಯು ಧರಿಸಿದ । ಉರಗಭೂಷಣನ

ನೋಡಮ್ಮಮ್ಮ॥ ೧ ॥ ತಲೆಯೆಂಬುದು ನೋಡಿದರೆ ಜಡೆಯು। ಹೊಳವುತಿದೆ ನೋಡಮ್ಮಮ್ಮ॥ ಹಲವು ಕಾಲ ತಪಸಿಲಿರುವ ರುದ್ರನ। ವೈಬೂದಿಯು ನೋಡಮ್ಮಮ್ಮ ॥ ೨ ॥ ಮನೆಯೆಂಬದು ಸ್ಮಶಾನವು । ಗಜಚರ್ಮಾಂಬರವ ನೋಡಮ್ಮಮ್ಮ॥ ಹಣವೆಂಬುದು ಕೈಯೊಳಗಿಲ್ಲ। ಖರ್ಪರವ ನೋಡಮ್ಮಮ್ಮ ॥ ೩ ॥ ಭೂತ ಪ್ರೇತ ಪಿಶಾಚಿಗಳೆಲ್ಲ। ಪರಿವಾರವು ನೋಡಮ್ಮಮ್ಮ॥ ಆತನ ನಾಮವು ಒಂದೆ ಮಂಗಳ। ಪುರಹರನ ನೋಡಮ್ಮಮ್ಮ ॥ ೪ ॥ ನಂದಿವಾಹನ ನೀಲಕಂಠ ನಿ । ರ್ಗುಣನ ನೋಡಮ್ಮಮ್ಮ ॥ ಇಂದಿರೆರಮಣ ಶ್ರೀಪುರಂದರವಿಠಲನ್ನ । ಹೊಂದಿದವನ ನೋಡಮ್ಮಮ್ಮ॥ ೫ ॥ ಶ್ರೀಃ ॥

## ೩೪. ರಾಗ ಸಾರಂಗ, ತ್ರಿಪುಟತಾಳ.

ಇವಗ್ಯಾಕೆ ಶೃಂಗಾರ । ಇವಗ್ಯಾಕೆ ಭಂಗಾರ ॥ ಪಲ್ಲ ॥ ಕಾಡ ಕರಡಿಯಂತೆ ಪೋಲುವ ದೇಹಕ್ಕೆ ॥ ಅನುಪಲ್ಲ ॥ ನೀರೊಳಗೆ ಮುಳುಗಿದವಗೆ ಪರಿಮಳಗಂಧವೇಕೆ । ಭಾರ ಪೊತ್ತವಗೆ ಪನ್ನೀರು ಯೇಕೆ ॥ ಕೋರೆದಾಡೆಯ ಘೋರ ಮುಖಕೇಕೆ ಕನ್ನಡಿ । ಕರುಳ ಹಾರ ಧರಿಸಿದವಗೆ ಹಾರಪದಕವೇಕೆ ॥ ೧ ॥ ನೆಲವನಳದವಗೆ ಕಾಲಗಿರುಗೆಜ್ಜೆ ಯೇಕೆ । ತಲೆ ತಾಯ ತರಿದವಗೆ ಮರಿಯಾದೆ ಯೇಕೆ ॥ ಚೀಲಾರುವೆಯ ಉಟ್ಟವಗ್ಯಾಕೆ ಪೀತಾಂಬರ । ಪಾಲ ಕದ್ದು ಕುಡಿದವಗೆ ಕುಸುಮ ಕೇಸರಿಯೇಕೆ ॥ ೨ ॥ ಬತ್ತಲೆ ನಿಂತಿದ್ದವಗೆ ಕಸ್ತೂರಿ ತಿಲಕವೇಕೆ। ಉತ್ತುಮಹಯವನೇರಿದವಗೆ ಪುಷ್ಪಕವೇಕೆ ॥ ಚಿತ್ತಜನಯ್ಯ ಶ್ರೀಪುರಂದರವಿಠಲ। ಭಕ್ತರ ಸಲಹುವಗೆ ಬಹಿರಂಗದಾಭರಣವೇಕೆ ॥ ೩ ॥ ಶ್ರೀಃ ॥

## ೩೫. ರಾಗ ನೀಲಾಂಬರಿ, ಮಟ್ಟೆತಾಳ.

ಏಕೆ ಚಿಂತೆಯ ಪಡುವಿ ನೀ। ಮರುಳೇ ॥ ಪಲ್ಲ ॥ ವಿಧಿ ಬರೆದ ವಾಕು ತಪ್ಪದು ಘಣೆಯಲಿ । ಮರುಳೇ ॥ ಅನುಪಲ್ಲ ॥ ಹುಟ್ಟುವುದಕಿಂತ ಮೊದಲೆ ತಾಯಿ ಮೊಲೆಯಲಿ । ಇಟ್ಟ ಕ್ಷೀರವನ್ನು ॥ ತೊಟ್ಟಿಲೊಳಗೆ ಮಲಗಿರಲು ನೀ ಘಳಿಸಿಕೊಂ। ಡಿಟ್ಟು ಉಣುತಿದ್ದಿಯಾ। ಮರುಳೇ ॥ ೧ ॥

ಉರಗ ವೃಶ್ಚಿಕ ಪಾವಕ ಕರಿನಂಜು । ಅರಸ ಹುಲಿ ಚೋರಭಯವು । ಮರುಳೇ ॥ ಹರಿಯಾಜ್ಞೆಯಿಂದಲ್ಲದೇ । ಇವುಗಳು ಬರಿದೆ ಬಾಧಿಸುತಿಪ್ಪವೆ । ಮರುಳೇ ॥ ೨ ॥ ಇಂತು ಸುಖದುಃಖಗಳಿಗೆ ಸಿಲುಕಿ ನೀ । ಭ್ರಾಂತನಾಗಿ ಕೆಡಲು ಬೇಡ । ಮರುಳೇ ॥ ಸಂತೋಷದಿಂದ ಅರ್ಚಿಸು ಪೂಜಿಸು । ಪುರಂದರವಿಠಲನ್ನ । ಮರುಳೇ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೩೬. ರಾಗ ಮೋಹನ, ಆದಿತಾಳ.

ತಪ್ಪುಗಳಿಲ್ಲವ ಪರಿಹರಿಸುವ ನ । ಮ್ಮಪ್ಪಾನಲ್ಲವೆ ನೀನು ॥ ಪಲ್ಲ ॥ ಅಷ್ಟಾದರು ಎನ್ನವಗುಣ ಯೆಣಿಸದೆ । ಸತ್ಯಸಂಕಲ್ಪ ಶಿವಪ್ಪ ನೀನು ॥ ॥ ಅನುಪಲ್ಲ ॥ ಬೆಳಗಿನ ಝಾವದಿ ಹರಿಯ ಸ್ಮರಣೆಯ । ಮಾಡಾದಿರುವದು ತಪ್ಪು । ಮಲ ಮೂತ್ರ ವಿಸರ್ಜನೆ ಮೃತ್ತಿಗೆಯಲಿ । ಮಲವ ತೊಳೆಯದಿರುವದು ತಪ್ಪು ॥ ತುಳಸಿ ವೃಂದಾವನ ಗೋಸೇವೆಗೆ । ಆಲಸ್ಯಮಾಡುತಲಿರುವದು ತಪ್ಪು । ನಳಿನ ಸಹೋದರಗರ್ಘ್ಯವನೀಯದೆ । ಕಲಿವ್ಯಾಸಂಗದಲಿರುವದು ತಪ್ಪು ॥ ೧ ॥ ದಿನ ದಿನ ಉದಯ ಸ್ನಾನವ ಮಾಡದ । ತನು ವಂಚನೆಯಾ ತಪ್ಪು । ಮುನಿಸುರ ಭೂಸುರರಾರಾಧಿಸದೆ । ಧನ ವಂಚನೆಯು ತಪ್ಪು ॥ ಕ್ಷಣ ಗುಣ ಜಿಜ್ಞಾಸಿಲ್ಲದೆ ದು । ರ್ಜನರ ಸಂಸರ್ಗದ ತಪ್ಪು । ವನಜಾಕ್ಷ ನಿನ್ನ ಧ್ಯಾನವ ಮಾಡದೆ । ಮನವಂಚನೆಯ ತಪ್ಪು ॥ ೨ ॥ ಕಣ್ಣಿಲಿ ಕೃಷ್ಣಾಕೃತಿಯ ನೋಡದೆ ಪರ । ಹೆಣ್ಣಿನ ನೋಡಿದ ತಪ್ಪು । ಅನ್ನವನರ್ಪಿಸದೆ ಅಜ್ಞಾನದಿ । ಉಣ್ಣುವ ನಾಲಿಗೆ ತಪ್ಪು ॥ ನಿನ್ನ ಕಥಾಮೃತವಿಲ್ಲದೆ ಹರಟೆಯ । ಮನ್ನಿಸುವ ಕಿವಿ ತಪ್ಪು । ಚಿನ್ಮಯ ಮೂರುತಿ ಚರಣಕ್ಕೆರಗದೆ । ಉನ್ಮತ್ತತೆಯ ತಪ್ಪು ॥ ॥ ೩ ॥ ಆನಂದನ ಸಂಕೀರ್ತನೆ ಮಾಡದೆ । ಹೀನವಿವಾದದ ತಪ್ಪು । ಶ್ರೀನಾಥಾರ್ಚನೆ ಇರಲೂಳಿಗವ । ಮಾಡಿದ ಕೈಯ ತಪ್ಪು ॥ ಶ್ರೀನಿರ್ಮಾಲ್ಯ ವಿರಹಿತ ಸುರಭಿಯ । ಘ್ರಾಣದ ನಾಸಿಕ ತಪ್ಪು । ಶ್ರೀನಾರಾಯಣನ ವೇಷಗೈಯದನ । ನಟನೆ ಪಾದದ ತಪ್ಪು ॥ ೪ ॥ ಯಜ್ಞಾತ್ಮಗೆ

ಯಜ್ಞವರ್ಜಿಸದೆ ಕಾಮ್ಯ । ಯಜ್ಞ ಮಾಡಿದ ತಪ್ಪು ॥ ಅಜ್ಞಾನ ಜ್ಞಾನ ದಲಿ ಕ್ಷಣ ಕ್ಷಣ । ಅಘಗಳ ಘಳಿಸುವ ತಪ್ಪು ॥ ಆಗತ ಶೌಚದ ಕರ್ಮವ ಜರಿದು ಸ । ಮಗ್ರ ಗುಹ್ಯದ ತಪ್ಪು ॥ ಯಜ್ಞೇಶ ಮಧ್ವಪತಿ ಪುರಂದರವಿಠಲನ । ವಿಸ್ಮರಣೆಯ ತಪ್ಪು ॥ ೫ ॥ ಶ್ರೀಃ ॥

## ೩೭. ರಾಗ ಸೌರಾಷ್ಟ್ರ, ಅಟತಾಳ.

ಶೋಭಾನ ಶೋಭಾನವೆ ॥ ಪಲ್ಲ ॥ ಭೂದೇವಿಯರಸ ವೆಂಕಟರಾಯಗೆ ॥ ಶೋಭಾನ ಶೋಭಾನವೆ ॥ ಅನುಪಲ್ಲ ॥ ಅಂದು ಕ್ಷೀರಾಂಬುನಿಧೀ ಮೊದಲಾಗಿ । ಇಂದಿರೆ ಹರುಷದಿಂದುದಿಸಿ ಬಂದು । ಕಂದರ್ಪ ಕೋಟಿ ಲಾವಣ್ಯಮೂರುತಿಯಾದ । ಮಂದಾರಮಾಲೆಯ ಹಾಕಿದ ದೇವಗೆ ॥ ೧ ॥ ಜನಕನ ಮನೆಯಲ್ಲಿ ರಾಜಾಧಿರಾಜರು । ಎಣಿಕೆಯಿಲ್ಲದಲೆ ಬರುತಿರಲು ॥ ಸನಕಾದಿವಂದ್ಯನ ಕಂಡು ಸಂತೋಷದಿ । ಜಾನಕಿ ಮಾಲೆಯ ಹಾಕಿದ ರಾಮಗೆ ॥ ೨ ॥ ರುಕುಮನು ಶಿಶುಪಾಲಗನುಜೆ ಈಯುವನೆಂದು । ಸಕಲ ರಾಯರಲ್ಲಿ ಬಂದಿರಲಾಗಿ ॥ ಭಕತವತ್ಸಲನನ್ನು ಕಂಡು ಸಂತೋಷದಿ । ರುಕುಮಿಣಿ ಮಾಲೆಯ ಹಾಕಿದ ಕೃಷ್ಣಗೆ ॥ । ೩ ॥ ಸತ್ಯಭಾಮೆಯು ನೀಲಭದ್ರೆ ಕಾಳಿಂದಿಯು । ಮಿತ್ರವೃಂದೆಯು ಲಕ್ಷಣೆಯು ಜಾಂಬವತೀ ॥ ಮತ್ತೆ ಆ ಸೋಳ ಸಾಹಸ್ರಕನ್ನಿಕೆಯರ । ಪ್ರತ್ಯಕ್ಷವಾಳಿದ ಕಲ್ಯಾಣನಿಗೆ ॥ ೪ ॥ ಪದುಮದೇಶದಲೊಬ್ಬ ದೇವಾಂಗನೆಯ । ಪದುಮಮುಖಿ ಶ್ರುತಿಹೃತಿಯಾ ॥ ಪದುಮನಾಭ ಶ್ರೀಪುರಂದರ ವಿಠಲಗೆ । ಪದುಮಾವತಿಪ್ರಿಯ ಶ್ರೀನಿವಾಸಗೆ ॥ ೫ ॥ ಶ್ರೀಃ ॥

## ೩೮. ರಾಗ ಶಂಕರಾಭರಣ, ಛಾಪುತಾಳ.

ನೋಡಿರಯ್ಯ ಹನುಮಂತನ ಮಹಿಮೆಯ । ಬೇಡಿರೊ ವರಗಳನು ॥ ॥ ಪಲ್ಲ ॥ ರೂಢಿಯೊಳು ಇವನನ್ನು ಪಾಡಿಪೊಗಳುತಿಪ್ಪ ಜನರ । ನೋಡಿ ನೋಡಿ ವರವನೀವ ಗಾಡಿಗಾರ ಹನುಮನ್ನ ॥ ಅನುಪಲ್ಲ ॥ ಅಂದು ದಶರಥ ಸುತನಾಗಿ । ಬಂದು ನಿಂದು ಸಾಕೇತದಿ । ಚಂದದಿಂದಿಪ್ಪನೆಂದು

ಅಂದದಿಂ ವಿಶ್ವಾಮಿತ್ರ ॥ ತಂದು ರಘುರಾಮನಿಗೊರೆಯಲಂದು ಯಾಗವ ಕಾಯ್ದು । ಸುಂದರ ರಾಮನಿಗೆ ವಂದನೆಗೈವನೀತ ॥ ೧ ॥ ಧೀರನಾಗಿ ಧನುವ ಮುರಿದು ಮರೆದು ಮರೆದು ದಂಡಕವ । ಸೇರಿ ಘೋರ ರಕ್ಕಸರ ಸದೆದು ಜರಿದು ತಂದು ಕಪಿಪತಿಯೊಡನೆ ॥ ಸೇರಿ ಸಖ್ಯವನ್ನೆ ಮಾಡಿ ಧಾರುಣಿಯೊಳಗೆ ಕಡು । ನಾರಿಯನ್ನೆ ಹುಡುಕಿಸಿದ ಧೀರ ರಾಮದೂತ ನೀತ ॥ ೨ ॥ ಖ್ಯಾತಿಯಿಂದ ಸೇತುವೆಯನು ಕಟ್ಟಿ ಮೆಟ್ಟಿ ರಾವಣಪಡೆಯ । ಭೂತಳದೊಳು ಕೆಡಹಿ ಬಿಟ್ಟು ಮಹಾಂತದೊಳು ॥ ಈತನೆಂದು ಸೇರಿಬಂದು ವಾತತನುಜನೆಮ್ಮ ಬಹು । ಪ್ರೀತಿಯಿಂದ ಪುರಂದರವಿಠಲನ್ನ ದಾಸನಾದ ॥ ೩ ॥ ಶ್ರೀಃ ॥

### ೩೯. ರಾಗ ದೇವಗಾಂಧಾರ, ಆದಿತಾಳ.

ಪ್ರಾಕು ಭೀಮನೆಂದು ಸ್ತುತಿಸಿದೆ ಪಾಲಿಸಬೇಕೆನ್ನ ॥ ಪಲ್ಲ ॥ ಸರೋರುಹಾಸನ ಕೌರವನಾಶನಗಿನ್ನು ಸಂಭ್ರಮ ಮೋದಕ ಪಲ್ಲವಪಾಣೀ ॥ ॥ ಅನುಪಲ್ಲ ॥ ವಾಣಿಯೊಡೆಯ ಯೆನ್ನ ಧಿಕ್ಕರಿಸಿ ನಿ । ರ್ವಾಣ ಮಾಡಿ ದಂಡಪಾಣಿ ಸಜ್ಜನಕೆಲ್ಲ । ವಾಣಿರಮಣ ನಿನಗೆಲ್ಲಣೆಗಾಣೆನು ಅಮಿತವುಳ್ಳ ಘೊರೆಯೆ ॥ ಎಣೆಗಾಣೆ ಮೂರ್ಲೋಕದಿ ಸರ್ವ । ಸ್ಥಾಣು ಮೊದಲಾದ ಪ್ರಾಣಿಗಳಿಲ್ಲಿ ಇದ್ದ । ಪ್ರಾಣಪಂಚರಿಗೆ ನೀನು ಮುಖ್ಯನಾಗಿ । ಪ್ರಾಣ ಮುಖ್ಯಪ್ರಾಣ ಸಲಹೋ ಪ್ರಾಣರಾಯ ॥ ೧ ॥ ಉಚ್ಚಸ್ಥಾನ ವಿರಾಟನ ಮನೆಯಲಿ । ಯಾಚಕರೂಪದೊಳೈವರು ತಾವು । ಪಾಚಕವೇಷವ ಧರಿಸಿ ಪಾಕವ । ಆಚರಿಸುತಲಿರಲು ॥ ನೀಚನ ಕೃತ್ಯವ ದ್ರೌಪದಿ ಬಂದು । ಸೂಚಿಸಲು ನೀ ಕೋಪದಿ ಸರ್ವ । ಕೀಚಕ ಮೊದಲವನನುಜರನೆಲ್ಲ । ಹೀಚಿ ಬಿಸಾಡಿದ ಮಹಿಮನೆ ॥ ೨ ॥ ಮಧ್ಯಗೇಹಭಟ್ಟನ ಮನೆಯಲ್ಲಿ ತಾ । ಉದ್ಭವಿಸಿ ತುರ್ಯಾಶ್ರಮ ಧರಿಸಿ । ಮಧ್ವಾಚಾರ್ಯರೆಂಬ ನಾಮಪ್ರ । ಸಿದ್ಧಿಯನು ಪಡೆದನುದಿನದಿ ॥ ಅದ್ವೈತರನೆಲ್ಲ ಗೆದ್ದು ಸದದು ಈ । ಮಧ್ವಮತವೆ ಭವರೋಗದ ಮದ್ದು । ಸದ್ವೈಷ್ಣವರ ಉದ್ಧಾರ ಮಾಡಿದ । ಮುದ್ದು ಪುರಂದರವಿಠಲನ ದಾಸಾ ॥ ೩ ॥ ಶ್ರೀಃ ॥

## ೪೦. ರಾಗ ಶಂಕರಾಭರಣ, ಅಟತಾಳ.

ಬಾರಯ್ಯ ವೆಂಕಟಕೃಷ್ಣ ॥ ಪಲ್ಲ ॥ ಬಾರಯ್ಯ ವೆಂಕಟಕೃಷ್ಣ ನೀ ಯೆನಗೆ । ಧಾರುಣಿಯೊಳು ನಿನ್ನ ಮೂರುತಿ ತೋರುತ ॥ ಅನುಪಲ್ಲ ॥ ಮನವೆಂಬ ಮಂಟಪವಾ ನಿನಗೆ ಹಾಕಿ ಯೆನ್ನ। ತನುವನೊಪ್ಪಿಸಿ ಕೈಯ ಮುಗಿವೆನೈಸೇ ॥ ವನಜಜಭವಸುರಮುನಿಗಳು ಭಜಿಸಲು । ಘನವು ಹಿಮನೆ ಪಾದಕ್ಕೆರಗಲಿ ಯೆನ್ನ ಶಿರ ॥ ೧ ॥ ಲಿಂಗದೇಹವೆಂಬೊ ಪವಳಿ ಶಾಧಾರವಾ । ಅಂಗವ ನಿನಗೆ ಕಾಣಿಕೆ ಇಡುವೆ ॥ ಮಂಗಳಮೂರುತಿ ಅಂಗನೆ ಸಹಿತ ಭು । ಜಂಗಶಯನ ಯೆನ್ನ ಕಂಗಳಿಗುತ್ಸಹವೀಯೋ ॥ ॥ ೨ ॥ ಉಡಿಗೆಜ್ಜೆ ರಾಗಟಿ ಪೆಂಡೆಗಳಿಂದೊಪ್ಪುವ। ಉಡುವ ಪೀತಾಂಬರ ಕೊರಳ ಕೌಸ್ತುಭ ॥ ದೃಢದಿಂದ ಶಂಖಚಕ್ರ ಕರಣಕುಂಡಲದಿಂದ । ಕಡಲಶಯನ ಯೆನ್ನ ಹೃದಯದೊಳಗೆ ನಿಲ್ಲೊ ॥ ೩ ॥ ಒಡೆಯ ನೀ ಯೆನಗೆ ಅನಾದಿಕಾಲದಿಂದ । ಬಡವನು ನಾ ನಿನ್ನ ದಾಸನು ಸತ್ಯ ॥ ಕಡು ಕರುಣದಿಂದ ದಾಸತ್ವಬೇಕೊ ಗ । ರುಡಗಮನ ವೆಂಕಟೇಶ ಯೆನ್ನ ಮನೆಗೆ ॥ ೪ ॥ ಬರಿಮನೆಯಲ್ಲ ಪರಿವಾರ ಉಂಟು । ಪರಮಪುರುಷ ನಿನ್ನ ರೂಪಗಳುಂಟು ॥ ಶಿರಿದೇವಿ ಸಹಿತಾಗಿ ಪುರಂದರವಿಠಲ । ಕರುಣ ದಿಂದಲಿ ಮನ್ಮಂದಿರದೊಳಗೆ ॥ ೫ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೪೧. ರಾಗ ಭೂಪಾಳಿ, ಝಂಪೆತಾಳ.

ತುಂಗೆ ಮಂಗಳ ತರಂಗೆ ॥ ಪಲ್ಲ ॥ ಹರಿಯ ಸರ್ವಾಂಗೆ ಜಯ ಜಯತು ಜಯ ಜಯ ತುಂಗಭದ್ರೆ ॥ ಅನುಪಲ್ಲ ॥ ಆದಿಯಲ್ಲೊಬ್ಬ ದೈತ್ಯ ಮೇದಿ ನಿಯ ಕದ್ದೊಯ್ದು । ಸಾಧಿಸುತ್ತಿರಲವನ ಬೆನ್ನಟ್ಟಿ ಬಿಡದೇ ॥ ಭೇದಿಸುತ ಲವನ ಭೂಮಿಯನೆತ್ತಿ ಕಾಯ್ದಂಥ । ಆದಿವರಾಹನ ದಾಡೆಗಳಿಂದ ಬಂದೇ ॥ ೧ ॥ ಜಲವೆಲ್ಲ ಹರಿಮಯ ಶಿಲೆಯೆಲ್ಲ ಶಿವಮಯ । ಮಳಲು ಮಿಟ್ಟಿಗಳೆಲ್ಲ ಮಣಿಯ ಮಯವೂ ॥ ಬೆಳದಿಪ್ಪ ದರ್ಭೆಗಳು ಸಾಕ್ಷಾತ್ತು ಬ್ರಹ್ಮಮಯ । ನಳಿನನಾಳವು ಸರ್ವ ವಿಷ್ಣುಮಯವೂ ॥ ೨ ॥ ಇದೇ

ವೃಂದಾವನ ಇದೇ ಕ್ಷೀರಾಂಬುಧಿ । ಇದೇ ವೈಕುಂಠಕೆ ಸರಿಯೆಂದೆನಿಸಿದೇ ॥ ಇದೆ ಬದರಿಕಾಶ್ರಮವೂ ಇದೆ ವಾರಣಾಸಿಗೆ । ಅಧಿಕ ಫಲವನ್ನೀವ ದೇವಿ ॥ ೩ ॥ ಧರೆಗೆ ದಕ್ಷಿಣ ವಾರಣಾಸಿಯೆಂದೆನಿಸಿದೆ । ಪರಮ ಪವಿತ್ರ ಪಾವನ್ನ ಚರಿತೆ ನಿನ್ನ ॥ ಸ್ಮರಣೆ ಮಾತ್ರದಿ ಕೋಟಿಜನ್ಮದಘವನು ಕಳೆವ । ಪರಿದು ಸಾಯುಜ್ಯಫಲವೀವ ದೇವಿ ॥ ೪ ॥ ಪರಮಭಕ್ತ ಪ್ರಹ್ಲಾದಗೊಲಿದು ಬಂದು । ನರಸಿಂಹಕ್ಷೇತ್ರವೆಂದೆನಿಸಿ ಮೆರದೇ ॥ ಧರೆಯೊಳಗಧಿಕ ವರ ಕೂಡಲೀಪುರದಲ್ಲಿ । ವರದಪುರಂದರವಿಠಲನಿರಲು ಬಂದೆ ॥ ೫ ॥

## ೪೨. ರಾಗ ಮುಖಾರಿ, ಝಂಪೆತಾಳ.

ಎಲೊ ಎಲೊ ಜೀವಾತ್ಮನೀ । ಸುಲಲಿತಾತ್ಮನ ನೆನದು ಸುಖಿಯಾಗೋ ಮನವೆ ॥ ಪಲ್ಲ ॥ ಇಕ್ಷುದಂಡ ಕೈಯೊಳಿರೆ ಇಂಧನವ ಮೆಲಲ್ಯಾಕೆ । ಅಕ್ಷಯಪಾತ್ರೆ ಇರಲು ಹಸಿದು ಇರಲ್ಯಾಕೆ ॥ ನಿಕ್ಷೇಪ ನಿಧಿಯಿರಲು ನಿರುತ ದಾರಿದ್ರ್ಯವ್ಯಾಕೆ । ಪಕ್ಷಿವಾಹನನಿರಲು ಪರದೈವವ್ಯಾಕೆ ॥ ೧ ॥ ಸುರಧೇನು ಕೈಸೇರಿ ಸುಖವಿಲ್ಲದಿರಲ್ಯಾಕೆ । ಗರುಡಮಂತ್ರವ ಜಪಿಸೆ ಗರಳ ಭಯವ್ಯಾಕೆ ॥ ತರಣಿ ಮೊದಲುದುಯಿಸಲು ಹಲವು ಜ್ಯೋತಿಗಳ್ಯಾಕೆ । ಮುರಹರನ ಪೂಜಿಸದೆ ಮುಂದೆಗೆಡಲ್ಯಾಕೆ ॥ ೨ ॥ ಭಾವಶುದ್ಧಿ ಇಲ್ಲದಿಹ ಬಯಲ ಡಂಬಕವ್ಯಾಕೆ । ದೇವತಾಂಕಿತವಿರದ ದೇಹ ತಾನ್ಯಾಕೆ ॥ ಆವಾಗ ಹರಿಯಿರಲು ಅನ್ಯಚಿಂತೆಗಳ್ಯಾಕೆ । ಪುರಂದರವಿಠಲನ ಭಜಿಸದೆ ಕೆಡಲ್ಯಾಕೆ ॥ ೩ ॥ ಶ್ರೀಃ ॥

## ೪೩. ರಾಗ ನಾಟಿ, ಝಂಪೆತಾಳ.

ಹನುಮಂತ ದೇವ ನಮೋ । ಮಹಾ । ವನಧಿಯನು ದಾಟಿ ದಾನವರ ದಂಡಿಸಿದೆ ॥ ಪಲ್ಲ ॥ ಅಂಜನೆಯ ಗರ್ಭ ಪುಣ್ಯೋದಯದಿ ಜನಿಸಿದೆ । ಕಂಜಸಖ ಮೂಡಲಿಕೆ ಕೈದುಡುಕಿದೆ ॥ ಭುಂಜಿಸಿ ಈರೇಳು ಜಗವೆಲ್ಲ ಸಲಹಿ ಭವ । ಭಂಜನಾತ್ಮಕ ನಿನಗೆ ಸರಿಯಾರೊ ಗುರುವೆ ॥ ೧ ॥ ಹೇಮಕುಂಡಲ ಹೇಮ ಯಜ್ಞೋಪವೀತಧರ । ಹೇಮ ಕೌಪೀನ ಕಟಿಸೂತ್ರಧಾರಿ ॥ ರೋಮ ರೋಮದಿ ಕೋಟಿಲಿಂಗ ಶ್ಯಾಮಲವರ್ಣ ।

ರಾಮಭೃತ್ಯನೆ ನಿನಗೆ ಸರಿಯಾರೊ ಗುರುವೆ ‖ ೨ ‖ ರಾಮಚಂದ್ರನಿಗೆ ನೀನಾಳಾಗಿ ಮೆರದೆ ನೀ । ಭೂಮಿಜೆಗೆ ಮುದ್ರೆಯುಂಗುರವನಿತ್ತೆ ‖ ಆ ಮಹಾ ಲಂಕಾಧಿನಗರ ವೊಳಪೊಕ್ಕು ನಿ । ರ್ಧಾಮಧೂಮವ ಮಾಡಿ ಬೆಳದೆ ಮಹಾಕಾಯ ‖ ೩ ‖ ಅಕ್ಷಕುಮಾರನಸು ಕುಟ್ಟ್ಯುರಸಿ ಬಿಸುಟು ಖಳ । ರಾಕ್ಷಸಾಧಿಪ ರಾವಣನ ರಣದಲಿ ‖ ವಕ್ಷಸ್ಥಳವನೊದ್ದು ಮೂರ್ಛೆ ಹೊಗಿಸಿದೆ ಜಗ । ದ್ರಕ್ಷಕನೆ ಶಿಕ್ಷಕನೆ ರಾಮದಳರಕ್ಷ ‖ ೪ ‖ ಶ್ರೀಮ ದಾಚಾರ್ಯ ಹರಿ ಖರೆ ದೈವವೆಂದೆನಿಪ । ಶ್ರೀಮಹಾಲಕುಮಿ ನಾರಾಯ ಣಾಖ್ಯ ‖ ರಾಮ ಪುರಂದರವಿಠಲರಾಯನವಸರದಾಳು ನಿ । ಸ್ಸೀಮ ಹನುಮಂತ ಬಲವಂತ ಗುಣವಂತ ‖ ೫ ‖ ಶ್ರೀಃ ‖

೪೪. ರಾಗ ಶಂಕರಾಭರಣ, ಆದಿತಾಳ.

ನೆಂಟನು ಸಣ್ಣವನೆಂದು । ನಂಬಿದೆನಮ್ಮ। ಗಂಟುಗಳ್ಳನೆಂದರಿಯದೆ । ಕಾಂತೆ ಕೇಳು ಶ್ರೀಕೃಷ್ಣನ ‖ ಪಲ್ಲ ‖ ಗೊಂಬೆಯ ಮದುವೆಗೆ ಯೆಂದು । ಸಂಭ್ರಮದಲ್ಲಿ ಬಾರೆಂದು ‖ ಬೆಂಬಿಡದೆನ್ನನು ಬಂದು । ಚುಂಬಿಸಿದನಲ್ಲೆ ಇಂದು ‖ ೧ ‖ ಪುಟ್ಟಮಕ್ಕಳೊಳಗೆಲ್ಲ । ನೆಟ್ಟನೆ ಯಜಮಾನನೆಂದು ‖ ಇಟ್ಟಡಿಯೊಳಗೆ ಯೆನ್ನ । ಬಟ್ಟಕುಚವ ಪಿಡಿದನಮ್ಮ ‖ ೨ ‖ ಅಷ್ಟರೊಳ ಗೆನ್ನ ಬಾಲ । ಕೃಷ್ಣ ಕರದಿಂದಯ್ಯೊಯ್ಯೊ ‖ ಮುಟ್ಟಬಾರದ ಬಳಿಯ । ಮುಟ್ಟಿ ನೋಡಿದ ಕೃಷ್ಣಯ್ಯ ‖ ೩ ‖ ಏನೆ ತಾನೆಂದು ಮಾತಾಡಿ । ವಿನ ಯದಿಂದೆನ್ನ ನೋಡಿ ‖ ಮಾಸಿನಿಯೊಳಗೆ ಮಾಡಿ । ನಿನ್ನ ಮಗ ಯೆನ್ನನು ಕೂಡಿ ‖ ೪ ‖ ಅಂದವೇನೆ ಈಪರಿಯೊ । ಳಿಂದು ಯೆನ್ನ ಬಿಗಿ ದಪ್ಪಿ ‖ ದಂದದಿ ನೆರದ ಶ್ರೀಪು । ರಂದರವಿಠ್ಠಲನಮ್ಮ ‖ ೫ ‖ ಶ್ರೀಃ ‖

೪೫. ರಾಗ ಆನಂದಭೈರವಿ, ಅಟತಾಳ.

ಮೊಸರ ಸುರಿದು ಓಡುವ । ಈ ಮಾಯಾದ । ಶಿಶುವ ತೋರಿಸು ಎನಗೆ ‖ ಹುಸಿಯನಾಡುವದ್ಯಾಕೆ ರಂಗಗೆ । ಮೊಸರೆಂಬ । ಪೆಸರು ಪೇಳಿ ದರಾಗದು । ಅಮ್ಮಯ್ಯ ‖ ಪಲ್ಲ ‖ ಮಂದಿರವನ್ನು ದಾಟಿ ನಮ್ಮ ರಂಗ । ಬಂದದುಂಟೇನೆ ಯೆಂದು ‖ ಹಿಂದು ಮುಂದರಿಯದೆ ದೂರಬಾರದು

ನಮ್ಮ । ಕಂದ ಗೋವಳರಾಯನ ॥ ೧ ॥ ಬೆಣ್ಣೆಯನಿಕ್ಕಿದರೆ । ನಮ್ಮ ರಂಗ । ಉಣಲೊಲ್ಲನಾದಿನಕೆ ॥ ಸಣ್ಣವನೆಂದು ಸಟೆಯ ಪೇಳಿದರೆ । ಪುಣ್ಯ ಪಾಪಗಳಿಲ್ಲವೆ ॥ ೨ ॥ ಕೆನೆಹಾಲು ಕೊಳ್ಳೆಂದರೆ । ನಮ್ಮ ರಂಗ । ಮುನಿದು ಹಾರುವನು ಕಾಣೆ ॥ ಮನೆ ಮನೆಗಳ ಪೊಕ್ಕು ಕದ್ದನೆಂದರೆ ನಮ್ಮ । ಮನಕೆ ಸೋಜಿಗವಲ್ಲವೆ ॥ ೩ ॥ ಆರಿಗೂ ಮಕ್ಕಳಲ್ಲೆ । ನಮ್ಮ ರಂಗ । ವೋರ್ವನೆ ಸರಿಯೆಂದರೆ ॥ ಆರ ಮಕ್ಕಳು ಹೋದರನ್ಯಾಯ ದಲಿ ನೀವು । ದೂರಬಾರದು ಬಲ್ಲಿರೇ ॥ ೪ ॥ ಅತ್ತಿತ್ತ ಹೋಗಲಿಲ್ಲ । ರಂಗಯ್ಯಗೆ । ಅಪವಾದ ಬಂದಿತಲ್ಲ ॥ ನಿತ್ಯದಿ ಮಧುಸೂದನನ ಕಂಡ ರೆಲ್ಲ । ಸತ್ಯದಿ ಹೇಳಿನಗೆ ॥ ೫ ॥ ಕಂತುಪಿತನ ನಾಮವ । ಕೇಳಿಲೆ ಗೋಪಿ । ಅಂತರಂಗದಿ ನೆನದು ॥ ಎಂಥವನಾದರು ದೇವಕುಲೋತ್ತಮ । ಅಂಥವನಲ್ಲ ಕಾಣೆ ॥ ೬ ॥ ಹೊತ್ತು ಕಳೆಯುವದ್ಯಾಕೆ । ನಿಮಗೆಲ್ಲ । ಅತ್ತೆ ಮಾವಂದ್ಯರಿಲ್ಲೆ ॥ ಪಥ್ಯವಾಗಿದೆ ನಿಮ್ಮ ಮನಸಿಗೆ ಬಲರಾಮ । ಕೃಷ್ಣರ ನೋಡುವೋದು ॥ ೭ ॥ ಕಾಣದೆ ಇರಲಾದಿರೆ । ನಮ್ಮ ಮುಖ್ಯ । ಪ್ರಾಣ ವಲ್ಲಭ ರಂಗನ ॥ ಜಾಣಾತನವ ಬಿಟ್ಟು ಕಾಣಿಸು ಬೇಗದಿ । ಪ್ರಾಣಗೋ ವಳರಾಯನ ॥ ೮ ॥ ಚಂದವಾಯಿತು ಗೋಪ್ಯಮ್ಮ । ನೀವೊಬ್ಬಳೆ । ಕಂದನ ಪಡದೆಯಮ್ಮ ॥ ಮಂದಿರದಲ್ಲಿದ್ದ ಪುರಂದರವಿಠಲನ್ನ ತಂದೊಮ್ಮೆ ತೋರಿಮಗೆ ಗೋಪ್ಯಮ್ಮ ॥ ೯ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೪೬. ರಾಗ ಕಾಂಬೋಧಿ, ಝಂಪೆತಾಳ.

ಇಷ್ಟು ಪಾವನವನೆ ಮಾಡಿದ್ದೆ ಸಾಕೊ । ಸೃಷ್ಟೀಶ ನೀ ಯೆನ್ನ ಉದ್ಧ ರಿಸಬೇಕೋ ॥ ಪಲ್ಲ ॥ ಒಡಲ ಕಿಚ್ಚಿಗೆ ಪರರ ಕಡು ನೋಯಿಸಿದೆನಯ್ಯ । ಕೊಡದೆ ಅನ್ಯರ ಋಣವನಪಹರಿಸಿದೆ ॥ ಮಡದಿಯಾ ನುಡಿಕೇಳಿ ಒಡ ಹುಟ್ಟಿದವರೊಡನೆ । ಹಡದ ತಾಯಿಯ ಕೂಡೆ ಹಗೆ ಮಾಡಿದೆ ॥ ೧ ॥ ಸ್ನಾನ ಜಪ ಹೋಮಗಳ ಮಾಡದಲೆ ವ್ಯೆಗೆಟ್ಟೆ । ಜ್ಞಾನಮಾರ್ಗವ ನಂತು ವೊದಲೆ ಬಿಟ್ಟೆ ॥ ಏನ ಪೇಳಲಿ ಪರರ ಮಾನಿನಿಗೆ ಮನಸಿಟ್ಟೆ ।

ಶ್ವಾನ ಸೂಕರದಂತೆ ಪೊರೆದೆ ಹೊಟ್ಟೆ ॥ ೨ ॥ ವ್ರತನಿಯಮ ಉಪವಾಸ ಒಂದಿನವು ಮಾಡಲಿಲ್ಲ । ಅತಿಥಿಗಳಿಗನ್ನವನು ನೀಡಲಿಲ್ಲ ॥ ಶ್ರುತಿಶಾಸ್ತ್ರ ಪೌರಾಣ ಕಥೆಗಳನು ಕೇಳಲಿಲ್ಲ । ವೃಥವಾಗಿ ಬಹುಕಾಲ ಗತವಾಯಿತಲ್ಲ ॥ ೩ ॥ ಶುದ್ಧ ವೈಷ್ಣವ ಜನ್ಮದಲ್ಲುದ್ಭವಿಸಿ ನಾನು । ಮಧ್ವಮತ ಗ್ರಂಥಗಳ ಪದ್ಧತಿಗಳನ್ನು ॥ ಬುದ್ಧಿಪೂರ್ವಕ ತಿಳಿದು ಕದ್ದುಂಡು ಕಾಯವನು । ವೃದ್ಧಿಪಡಿಸಿದೆನಯ್ಯೊ ತಂದೆ ಶ್ರೀಹರಿಯೆ ॥ ೪ ॥ ತಂದೆ ತಾಯ್ಗಳ ಸೇವೆ ಒಂದಿನವು ಮಾಡಲಿಲ್ಲ । ಮಂದಭಾಗ್ಯರ ಭವಣೆ ತಪ್ಪಲಿಲ್ಲ ॥ ಹಿಂದೆ ಮಾಡಿದ ದೋಷ ಒಂದುಳಿಯದರುಹಿದೆನು । ತಂದೆ ಪುರಂದರ ವಿಠಲ ಮುಂದೆನ್ನ ಸಲಹೋ ॥ ೫ ॥ ಶ್ರೀಃ ॥

## ೪೭. ರಾಗ ಪೂರ್ವಿ, ಆದಿತಾಳ.

ಇರಬೇಕು । ಇರದಿರಬೇಕು ॥ ಪಲ್ಲ ॥ ಸಂ । ಸಾರದಿ ಜನಕಾದಿ ರಾಜಋಷಿಗಳಂತೆ ॥ ಅನುಪಲ್ಲ ॥ ಮಿಥಿಲಾಪಟ್ಟಣವು ದಹಿಸಿತೆಂಬುದ ಕೇಳಿ । ಮಿಥಿಲೇಶ "ಮಮ ಕಿಂಚಿನ್ನ ದಹ್ಯತಿ" ಎಂಬಂತೆ । ಇರಬೇಕು ॥ ೧ ॥ ದಧೀಚಿ ಋಷಿ ತನ್ನ ಅಸ್ಥಿ ಸುರರಿಗಿತ್ತು । ಮಧುವೈರಿ ವೈಕುಂಠ ಪುರವಿತ್ತ ತೆರದಂತೆ । ಇರಬೇಕು ॥ ೨ ॥ ಪುರಂದರವಿಠಲನ್ನ ದಾಸರ ಸಂಗಡ । ಪುತ್ರ ಮಿತ್ರ ಕಳತ್ರ ಬಂಧುಗಳಂತೆ । ಇರಬೇಕು ॥ ೩ ॥ ಶ್ರೀಃ ॥

## ೪೮. ರಾಗ ಸಾವೇರಿ, ಝಂಪೆತಾಳ.

ನೋಡಿ ದಣಿಯವು ಕಂಗಳು । ರೂಢಿಯೊಳಗತ್ಯಧಿಕ ರಂಗೇಶನತಿ ಚೆಲುವ ॥ ಪಲ್ಲ ॥ ಕೆಂದಾವರೆಯ ಪೋಲ್ವ ಪದಗಳಿಗೆ ನವರತುನ । ಅಂದುಗೆಯ ಮೇಲೆ ಹೊಂಗೆಜ್ಜೆ ಪೊಳೆಯೆ ॥ ಅಂದದಿಂ ಸಕಲ ದೇವೋತ್ತಮರ ಮಕುಟದೊಲ । ವಿಂದ ಬೆಳಗುತಿಹ ಕೋಮಲ ಪದಾಬ್ಜಗಳ ॥ ॥ ೧ ॥ ಥಳಥಳಿಸ ಶಶಿಯ ಕಾಂತಿಯ ಜರೆವ ನಖ ಕಾಂತಿ । ಪೊಳೆವ ಜಾನುವಿನ ಜಂಘೆಯ ಸೊಂಪಿನ ॥ ಪೊಳೆವ ಊರುಗಳ ಪೀತಾಂಬರಾಹಿತ ಮಧ್ಯ । ಸುಳಿ ನಾಭಿ ತ್ರಿವಳಿಮಣಿಖಚಿತ ವೃಂದಗಳಮಿಗೆ ॥ ೨ ॥ ಶ್ರೀವತ್ಸಲಾಂಛನ ಕುಂಡಲ ಪ್ರಭೆಯು । ಶ್ರೀವಾಸುದೇವನಸ್ಮಿತವದನದ॥

ಪಾವನಾತ್ಮಕನ ಚಂಪಕ ನಾಸಿಕದ ಬೆಡಗು । ದೇವದೇವನ ನಯನಗಳು ಕಡು ಚೆಲುವ ॥ ೩ ॥ ಮದನ ಕಾರ್ಮುಕಕೆ ಮಾರ್ಮಲೆವ ಪೂರ್ಬಿನ ಗಾಡಿ । ಮುದವೀವ ಕರ್ಣಕುಂಡಲವು ಪೊಳೆಯೆ ॥ ಪದುಮನಾಭನ ಪಣೆಯ ಕಸ್ತೂರಿತಿಲಕವನು । ಯದುಕುಲೋತ್ತಮನ ಮಣಿಖಚಿತ ವೃಂದಗಳಮಿಗೆ ॥ ೪ ॥ ಉಭಯ ಕಾವೇರಿ ಮಧ್ಯದಿ ಶೇಷತಲ್ಪದೊಳು । ಶುಭಕ್ರಿಯಾವೃತ ಶ್ರೀಲತಾಂಗಿ ಸಹಿತ । ಅಭಯವನು ಭಕುತರಿಗೆ ಅನವರತ ಕರೆದೀವ । ಪುರಂದರವಿಠಲನ ಪದಯುಗಳ ಕಡು ಚೆಲುವ ॥ ೫ ॥

೪೯. ರಾಗ ಸೌರಾಷ್ಟ್ರ, ಅಟತಾಳ.

ಆರು ಬಿಟ್ಟರೂ ಹರಿ ನೀ ಬಿಡೆಯೆನುತಿದ್ದೆ । ರಾಮ ರಾಮ ॥ ಸ್ವಾಮಿ । ನೀನು ಬಿಟ್ಟರೆ ನಾನು ಆರನು ಸೇರಲಿ । ರಾಮ ರಾಮ ॥ ಪಲ್ಲ ॥ ತುಂಬಿದ ಕೆರೆಯಲ್ಲಿ ಹರಗೋಲು ಮುಳುಗಿತು । ರಾಮ ರಾಮ ॥ ಅಲ್ಲಿ । ಹಂಬಲಿಸಿದರೆ ಕೈಕೊಡುವರಾರಿಲ್ಲವು । ರಾಮ ರಾಮ ॥ ೧ ॥ ಮುಂದೆ ಹೋದರೆ ಹೆಬ್ಬಾವಟ್ಟಿ ಬರುತ್ತಿದೆ । ರಾಮ ರಾಮ ॥ ಅಲ್ಲಿ । ಹಿಂದೆ ಹೋದರೆ ಹೆಬ್ಬುಲಿ ಬಾಯಬಿಡುತಿದೆ । ರಾಮ ರಾಮ ॥ ೨ ॥ ಇದಕಂಜಿಯೆ ಮಡುವಿನಲಿ ನಾ ಹೊಕ್ಕರೆ । ರಾಮ ರಾಮ ॥ ಅಲ್ಲಿ । ಅದುಭುತವಾದ ನೆಗಳು ನುಂಗುತಲಿದೆ । ರಾಮ ರಾಮ ॥ ೩ ॥ ಕೃಷ್ಣಾವತಾರದಿ ಪಶುಗಳ ಕ್ಯಾದೆಯೊ । ರಾಮ ರಾಮ ॥ ಅಲ್ಲಿ । ವಿಷದ ಕಾಳಿಂಗನ ಹೆಡೆಯನ್ನೆ ತುಳಿದ್ಯೊ ಶ್ರೀ । ರಾಮ ರಾಮ ॥ ೪ ॥ ದೆಸೆಯಲ್ಲೊಬ್ಬರ ಕಾಣೆ ತಲ್ಲಣಿಸುವಾಗ । ರಾಮ ರಾಮ ॥ ಎನ್ನ । ಶಿಶುವೆಂದು ಸಲಹಯ್ಯ ಪುರಂದರವಿಠ್ಠಲ । ರಾಮ ರಾಮ ॥ ೫ ॥ ಶ್ರೀಃ ॥

೫೦. ರಾಗ ಸೌರಾಷ್ಟ್ರ, ಅಟತಾಳ.

ಮುಂದೆ ಭಲಾಯೆಂದು ಹಿಂದಾಡಿಕೊಂಬರ । ಸಂಗಬೇಡ । ಕುಂದು । ನಿಂದೆಗಳಪವಾದ ನೀಡುವರ ಪ್ರ । ಸಂಗ ಬೇಡ ॥ ಪಲ್ಲ ॥ ತುದಿ ನಾಲಿಗೆ ಬೆಲ್ಲ ಎದೆ ಕತ್ತರಿಯವರ । ಸಂಗ ಬೇಡ । ಹದವು ಮೀರಿದ ಮೇಲೆ ಹಲವನಾಡುವರ । ಸಂಗ ಬೇಡ ॥ ೧ ॥ ಸ್ತ್ರೀಯಾವಗುಣ ಬಿಟ್ಟು ಪರ

ರವಗುಣ ತೋರ್ಪರ । ಸಂಗ ಬೇಡ । ದಯೆ । ಧರ್ಮ ದಾಕ್ಷಿಣ್ಯ ಅರಿಯದ ಮನುಜರ । ಸಂಗ ಬೇಡ ॥ ೨ ॥ ವಿನಯ ವಿವೇಕವಿಲ್ಲದ ವಿದ್ವಾಂಸರ । ಸಂಗ ಬೇಡ । ತನಗಿಲ್ಲದಂಥ ಬಂಟರ ಮಿತ್ರಜನರ । ಸಂಗ ಬೇಡ ॥ ೩ ॥ ಅಡಿ ಅಳುಕುವ ಅಜ್ಞಾನಿ ಮನುಜನ । ಸಂಗ ಬೇಡ । ಕೂಡೆ ಕುಮತಿಗಳ ಕುಪಿತ ಮನುಜರ । ಸಂಗ ಬೇಡ ॥ ೪ ॥ ತನ್ನ ಕಾರ್ಯಕ್ಕಾಗಿ ಪರರ ಕೆಡಿಸುವರ । ಸಂಗ ಬೇಡ । ಚನ್ನ ಪುರಂದರವಿಠಲನ್ನ ಹೊರತು ಪ್ರ । ಸಂಗ ಬೇಡ ॥ ೫ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೫೧. ರಾಗ ನಾದನಾಮಕ್ರಿಯೆ, ಆಟತಾಳ.

ರಂಗನ ನೋಡಿರೆ ರಾಜಕುವರ ನರ । ಸಿಂಗ ದೇವ ನಮ್ಮ ದೇವಕಿ ಸುತನ ॥ ಪಲ್ಲ ॥ ಹಮ್ಮಿನ ತಾಯಿತ ತೋಳ ಭಾಪುರಿಯೊ । ಘಮ್ಮನೆ ಘಲ್ಲೆಂಬ ಗೆಜ್ಜೆಯ ಧ್ವನಿಯೊ ॥ ಸುಮ್ಮಹಿಮನ ಕಿವಿಯಲ್ಲಿ ಚೌಕುಲಿಯೊ । ತಿಮ್ಮರಾಯನಿಟ್ಟ ಸೊಬಗಿನ ಬಗೆಯೊ ॥ ೧ ॥ ಶುಕ್ಕುರವಾರದ ಪೂಜೆಗೊಂಬುವನ । ಸಕ್ಕರೆ ಪಾಲ್ಮೊಸರು ಬೆಣ್ಣೆಮೆಲ್ಲುವನ ॥ ಘಕ್ಕನೆ ಸುರರಿಗೆ ಅಮೃತವಿತ್ತವನ । ರಕ್ಕಸ ಕುಲ ವೈರಿ ರಾವಣಾಂತಕನ ॥ ೨ ॥ ಪಾಪವಿನಾಶನಿ ಸ್ನಾನವ ಮಾಡಿ । ಪಾಪಗಳೆಲ್ಲವು ಬೇಗ ಬಿಟ್ಟೋಡಿ ॥ ಈಪರಿ ದಿನ ದಿನ ಮೂರುತಿ ನೋಡಿ । ಶ್ರೀಪತಿ ಪುರಂದರವಿಠಲನ ಪಾಡಿ ॥ ೩ ॥ ಶ್ರೀಃ ॥

## ೫೨. ರಾಗ ಆನಂದಭೈರವಿ, ಅಟತಾಳ.

ಸಾಮಾನ್ಯವಲ್ಲ ಶ್ರೀಹರಿಸೇವೆ । ಪಾಮರ ಜನರಿಗೆ । ಸಾಮಾನ್ಯವಲ್ಲ ಶ್ರೀಹರಿಸೇವೆ ॥ ಪಲ್ಲ ॥ ಸಾಮಜ ವರದನ ಪ್ರೇಮದಿ ನೆನೆವದು । ತಾಮಸ ಬುದ್ಧಿಯ ತಾ ತಗ್ಗಿಸದೆ ॥ ಅನುಪಲ್ಲ ॥ ಅಂತರ ಮಲಿನವಳಿಯಬೇಕು । ಸಂತತ ಶ್ರವಣದಿ ಶ್ರೀಕಾಂತನ ಚರಿತ ಕೇಳಲು ಬೇಕು ॥ ಸಂತಸವಿರಬೇಕು ಸಂತಜನರ ಗುಣ । ಸಂತತ ಮನದಿ ನಿರಂತರದಲಿ ತಾ ಚಿಂತಿಸಬೇಕು ॥ ೧ ॥ ಜ್ಞಾನಕರ್ಮೇಂದ್ರಿಯ ನಿಗ್ರಹಿಸಿ । ಜ್ಞಾನವ ಸಂಗ್ರಹಿಸಿ ।

ಹೀನವೃದ್ಧಿಗಳೆರಡಕೆ ತಾ ಸಹಿಸಿ ॥ ದೀನತೆಯನು ವಹಿಸಿ ಮಾನಪಮಾನ ಸಮಾನವೆಂದರಿದು ನಿ । ಧಾನದಿ ಹರಿಗುಣ ಧ್ಯಾನವ ಮಾಳ್ಪದು ॥ ೨ ॥ ಸರ್ವಾಂತರ್ಯಾಮಿ ಶ್ರೀಹರಿಯೆಂದು । ಸರ್ವೇಶ್ವರನೆಂದು ಸ್ವರಮಣ ನೆಂದು ॥ ಸರ್ವಾನುಗನೆಂದು ಸರ್ವ ಮೂರುತಿ ಪುರಂದರವಿಠಲನ । ಸರ್ವದ ಧ್ಯಾನಿಸಿ ಗರ್ವವಳಿಯಬೇಕು ॥ ೩ ॥ ಶ್ರೀಃ ॥

೫೩. ರಾಗ ಸಾದಸಾಮಕ್ರಿಯೆ, ಅಟತಾಳ.

ತಾಳಿಯ ಹರಿದು ಬಿಸಾಟಿ । ಇಂಥ । ಕೀಳು ದೇವತೆಗಳ ಹೆಸರಲ್ಲಿ ಕಟ್ಟಿದ ॥ ಪಲ್ಲ ॥ ಒಡತಿಯೆಲ್ಲಮ್ಮನೆಂದು ಇಲ್ಲದ್ದರಿಕೆ ಹೊತ್ತು । ಸಿಡಿಯಾ ಊರಿಸಿಕೊಂಡು ಜೋಲಾಡುವಿ ॥ ಕಡು ಕೋಪದಿಂದೆಮನವರು ಶಿಕ್ಷಿ ಸಲು ನಿ । ನ್ನೊಡನೆ ಬಂದಾಗ ರಕ್ಷಿಸುವಳೆ ಮೂಳಿ ॥ ೧ ॥ ಹೊಸನವ ಣೆಯ ಹುಗ್ಗಿ ಹೊಸ್ತಿಲ್ಹುಣ್ಣಿಮಿದಿನ । ಹಸನಾಗಿ ಮಾಡಿ ಹೊಸ್ತಿಲ ಪೂಜೆಯ ॥ ನಿಶಿಯಲ್ಲಿ ಗೈವದು ತರವಲ್ಲ ಇದರಿಂದ । ಅಸಿಪತ್ರ ವನದಲ್ಲಿ ಬಳಲುವೆ ಮೂಳಿ ॥ ೨ ॥ ಬನದ ಹುಣ್ಣಿಮೆ ದಿನ ನೂರೆಂಟು ಪಲ್ಯಗ । ಳನು ಮಾಡಿ ಭಕ್ತಿಯಿಂ ಪೂಜಿಸುವಿ ॥ ದಿನಪನಸುತನ ದೂತರು ಎಳೆ ದ್ಯೊಯಾಗ । ಬನದ ಶಂಕರಿ ಕಾಯಲರಿವಳೆ ಮೂಳಿ ॥ ೩ ॥ ಚಂದಮ್ಮ ನ್ಹೆಸರಿಟ್ಟಲಂಕಾರಗಳ ಮಾಡಿ । ನಂದನವ ನೋಡಿ ಸುಖಬಡುವ ॥ ಮುಂದೆಗಾಣದೆ ಎಳದೊಯ್ದ ಮಪುರದೊಳು । ಕೊಂದರೆಂಬುದು ಕೇಳಿ ತಿಳಿಯಲಿಲ್ಲವೆ ಮೂಳಿ ॥ ೪ ॥ ಭಾರತದ್ಹುಣ್ಣಿಮೆ ದಿನ ದೇವತೆಯ ಮಾಡಿ । ಹೂರಣದಾರತಿಯನು ಬೆಳಗಿ ॥ ಶೀರೆ ಕಳದು ತೊಪ್ಪಲುಡು ವಾದುಚಿತವಲ್ಲ । ರೌರವನರಕಕ್ಕೈದುವೆ ಕೇಳೆ ಮೂಳಿ ॥ ೫ ॥ ದುರುಳ ಭವಾನಿಯ ಬಿರಿದೆಂದು ಕವಡಿಯ । ಸರ ಕಂಠದಲಿ ಕಟ್ಟಿ ಕಮಠನುಟ್ಟು ॥ ಭರದಲ್ಲಿ ಹಡಗಿಲಿ ಕಡೆಯಾಗದಲೆ ಪೈ । ತರಣಿ ನರಕ ನಿನಗಹುದು ಮೂಳಿ ॥ ೬ ॥ ಚೆನ್ನಾಗಿ ನಾಗರ ಉಪವಾಸವನು ಮಾಡಿ । ಮಣ್ಣು ಹುತ್ತಿಗೆ ಹಾಲು ಎರೆದು ಬರುವಿ ॥ ವನ್ನಜಾಪ್ತನ ಪುತ್ರನಲ್ಲಿ ದಂಡಿಸು ವಾಗ । ನಿನ್ನ ನಾಗರ ಮಾತಾಡುವನೇನೆ ಮೂಳಿ ॥ ೭ ॥ ಕಂಚಿನ

ಗಡಿಗೆ ಸೌಭಾಗ್ಯ ಕೊಡುವದೆಂದು । ಅರ್ಚಿಸುವೆಲೆ ನೀ ಮಾಡುವ ತಪ್ಪಿಗೆ ॥ ಕಿಚ್ಚಾಗಿ ಕಾಲನಾಳುಗಳು ನಿನ್ನನು ಬಹು । ನುಚ್ಚು ನುಚ್ಚು ಮಾಡಿ ಕೊಲ್ವರೆ ಮೂಳಿ ॥ ೮ ॥ ಶಿರಿ ಬ್ರಹ್ಮಾದಿಗಳೊಡೆಯನು ಹರಿಯಿರಲಾಗಿ । ಹಿರಿಯನೊಡೆಯನೆಂದು ಕಲ್ಪಿಸುತಾ ॥ ಸರತೊಟ್ಟಿಲೇರಿಸಿ ಪೆಸರಿಟ್ಟು ಕರವಿ ನಿ । ನ್ನವರೆ ಯಮಕಿಂಕರರು ಕೇಳೆ ಮೂಳಿ ॥ ೯ ॥ ಕರಿಮಣಿ ಕೇಶವಿಲ್ಲದ ಮುಂಡೆ ಕರತಂದು । ಶಿರಿ ಸಹದೇವಿಯೆಂದರ್ಚಿಸುವಿ ॥ ಹಿರಿಯರ ಸಮ್ಮತವಲ್ಲಿದು ಯೆಂದೆಂದು । ನರಕದೊಳುರುಳುವಿ ನಿಶ್ಚಯವೆಲೆ ಮೂಳಿ ॥ ೧೦ ॥ ಖಂಡೆರಾಯನ ಮಾಡಿ ಕೆಂಡದ ರೊಟ್ಟಿಯು । ಗುಂಡಿಗೆ ತುಪ್ಪವನರ್ಪಿಸುವಿ ॥ ಚಂಡ್ಯಮನರು ಕೂಡಿ ಕೊಂಡ್ಯೊದಿಡುವಾಗ । ಖಂಡೆರಾಯ ಕಾದುಕೊಂಡಾನೆ ಮೂಳಿ ॥ ೧೧ ॥ ಹಡದ ಮಕ್ಕಳ ಮುಂಜಿ ಮದುವೆಗೆ ನೇಮಿಸಿ । ಮಡವಾಳತಿಯ ಅಧಃಕೇಶ ತಂದು ॥ ಸಡಗರದಲಿ ಸ್ಥಾಪಿಸುವಿ ಕುಂಭಿಪಾಕದೊ । ಳಡಿಗೆಯ ಮಾಡಿಸುವರು ನಿನ್ನ ಮೂಳಿ ॥ ೧೨ ॥ ಜಲದೇವಾರೆಂದು ಮೂರೆಡೆಗೆ ದೀಪವ ತುಂಬಿ । ಜಲಜನಾಭನಿಗೆ ಅರ್ಪಿತಹಲ್ಲದ ॥ ಮಲವುಂಡು ಸತ್ಕುಲ ಕೆಡಿಸುವೆ ನಿನ್ನ ಮೈ । ಹೊಳನಾರು ಚೆನ್ನಾಗಿ ಯಮನಾಳು ಮೂಳಿ ॥ ೧೩ ॥ ಪರಿಪರಿ ವಾದ್ಯಸಂಯುಕ್ತ ಮೈಯುಬ್ಬಿಸು । ಹರುಷದಿ ಈಚಲಗೊನೆಯ ತಂದು ॥ ವರ ಮಂದಿರದೊಳು ಪೂಜಿಸುವಿ ನೀ ಕಾಲನ । ನಿರಯದಿವರು ಕೊರದು ದಂಡಿಪರೆಲೆ ಮೂಳಿ ॥ ೧೪ ॥ ಹಿಂದಿನಾನಾಚಾರವೇನಾದರಾಯಿತು । ಮುಂದಾರು ಮುಕುತಿ ಪಥವ ಬಯಸಿ ॥ ಕಂದೆರದು ನೋಡದನ್ಯ ದೈವಗಳ ಪು । ರಂದರವಿಠಲನ ಭಜಿಸೆಲೆ ಮೂಳಿ ॥ ೧೫ ॥ ಶ್ರೀಃ ॥

## ೫೪. ರಾಗ ಕಾಂಬೋಧಿ, ಆದಿತಾಳ.

ಬರಿದೆ ನೀ ಬಯಸದಿರಿಹಲೋಕ ಸುಖವೆಂಬೊ । ಅರಗಿನ ಪಾಯಸವ ॥ ॥ ಪಲ್ಲ ॥ ಕರಣ ಶುದ್ಧಳಿಸು । ಪರಲೋಕ ಸುಖವೆಂಬ । ಶ್ಯಾವಿಗಿ ಪಾಯಸವ ॥ ಹೇ ಮನವೆ ॥ ಅನುಪಲ್ಲ ॥ ಮುಂದರಿಯದೆ ಬಾಳ್ವ ಮೂಢ ನೃಪನ ಸೇವೆ । ಮುಗ್ಧರಾಗಿಯ ಹಿಟ್ಟು ॥ ಮಂದಮತಿಗಳೊಳು ಸ್ನೇಹವ

ಮಾಡಲು । ನೀ ಪೋಗುವಿ ಕೆಟ್ಟು ॥ ಒಂದಿನ ಬಿಡದೆ ಸತ್ಕಥಾಶ್ರವಣ ವೆಂಬ । ಪಾಥೇಯುವ ಕಟ್ಟು ॥ ಸಂದೇಹವಿಲ್ಲದೆ ದೊಡ್ಡ ಮಾರ್ಗದಲಿ ಮು । ಕುಂದನಂಘ್ರಿಯ ಕಟ್ಟು ॥ ಹೇ ಮನವೆ ॥ ೧ ॥ ಅಗ್ಗದಾಶೆಗೆ ಸಂಗ್ರಹಿಸಬೇಡಘವೆಂಬ । ಅಡಿಗಂಟು ದವಸವನು ॥ ನುಗ್ಗಲೊತ್ತಿ ಕಾಮಾದಿಗಳನು ಸಂಪಾದಿಸು । ಸತ್ಕರ್ಮವೆಂಬುದನು ॥ ಯೋಗ್ಯರಡಿಗೆ ಶುದ್ಧಮನದಿಂದ ಕಾರ್ಮುಕ । ದಂದದಲಿ ಶಿರವನು ॥ ಬಗ್ಗಿ ನಡೆದು ಪರಿಹರಿಸಿ ಕಾಡುವ । ಸಂಸಾರ ಭಂಗವನು ॥ ಹೇ ಮನವೆ ॥ ೨ ॥ ಸಕ್ಕರೆ ಘೃತಪಾಲಿನಿಂದತಿಶಯ ರುಚಿಯಿಂ । ದೆಸವೀ ಹರಿಕಥೆಯ ॥ ಚೊಕ್ಕ ಬುದ್ಧಿಯಿಂದ ಸಂಪಾದಿಸುತಿರು । ಅಲ್ಪರ ಸಂಗತಿಯ ॥ ಸೊಕ್ಕೊಳಿತಲ್ಲ ಕೇಳೆಲೋ ಮದಡಾತ್ಮನೆ । ಸ್ವಾಮಿ ಸೇವಕಸ್ಥಿತಿಯ ॥ ಘಕ್ಕನರಿತು ಸೇರು ಪುರಂದರವಿಠಲನ್ನ । ಚರಣಕಮಲದ್ಯುತಿಯ ॥ ಹೇ ಮನವೇ ॥ ೩ ॥

## ೫೫. ರಾಗ ರೇಗುಪ್ತಿ, ಝಂಪೆತಾಳ.

ಛೀ ಹಳಿ ಥೂ ಖೋಡಿ ಪಾಪಿ ಮನವೆ ॥ ಪಲ್ಲ ॥ ಕುಹಕಬುದ್ಧಿಗಳನ್ನು ಬಿಡು ಕಂಡ್ಯ ಮನವೆ ॥ ಅನುಪಲ್ಲ ॥ ಬಣ್ಣದ ಬೀಸಣಿಗ್ಯಂತೆ ಹೆಣ್ಣು ತಿರಗೋದು ಕಂಡು । ಕಣ್ಣುಸನ್ನೆಯ ಮಾಡಿ ಕೈಹೊನ್ನು ದೋರಿ ॥ ಸುಣ್ಣದ್ಹರಳಿನ ಮೇಲೆ ತಣ್ಣೀರು ಹೊಯ್ದಂತೆ । ಕಣ್ಣಲೀ ಕೆಂಡವಾ ಚೆಲಿ ಕೊಂಬೆ ಮನವೆ ॥ ೧ ॥ ವಾಸುದೇವನ ಪೂಜೆ ಒಮ್ಮೆ ಮಾಡೆಂದರೆ । ಬೇಸತ್ತುಕೊಂಡು ತಲೆಚಟ್ಟೆಕ್ಕಿ ಕುಳಿತಿ ॥ ಆ ಸಮಯದಲ್ಲೊಬ್ಬ ಕಾಸು ಕೊಡುವೆನೆನಲು । ದಾಸಿಯಾ ಮಗನಂತೆ ಬೆನ್ನಟ್ಟಿ ಹೋದಿ ಮನವೆ ॥ ॥ ೨ ॥ ಪಗಡೆ ಚತುರಂಗ ಕವಡಿಯನಾಡ ಕರೆದರೆ । ನಿಗರಿದವು ಕರ್ಣಗಳು ಮಚ್ಚೆಯಂತೆ ॥ ಜಗದೀಶನಾ ದಿನದಿ ಜಾಗರಕೆ ಕರೆದರೆ । ಮುಗಿಲ್ಹರಿದು ಬಿದ್ದಂತೆ ಧರೆಗಿಳಿವೆ ಮನವೆ ॥ ೩ ॥ ನೆರೆಹೊರೆ ಮನೆಯಲ್ಲಿ ಪ್ರಸ್ತವಾಗಲು ಆಗ । ಕರೆಯದೆ ಪೋಗಿನ್ನು ಹಾಳು ಹರಟೆ ॥ ಬರಗೆಟ್ಟು ನೂರಾರು ಸುದ್ದಿ ಹೇಳುತ ಅವನ । ಹಿರಿಯ ಮಗನಂತೆ ಉದರವ ಪೊರೆದಿ ಮನವೆ ॥ ೪ ॥ ಬಿಂದು ಮಾತ್ರವೆ ಸುಖವು ದುಃಖ ಪರ್ವತದಷ್ಟು ।

ಸಂದೇಹವಿಲ್ಲವಿದು ಶಾಸ್ತ್ರಸಿದ್ಧ ॥ ತಂದೆ ಶಿರಿಪುರಂದರಾವಿಟ್ಠಲಾರಾಯನ್ನ। ವಂದನೆಯ ಮಾಡಿ ನೀ ಸುಖಿಯಾಗೊ ಮನವೆ ॥ ೫ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೫೬. ರಾಗ ಮಾಯಾಮಾಳವಗೌಳ, ಆದಿತಾಳ.

ಒಂಭತ್ತು ಬಾಗಿಲೊಳು ಒಂದೇ ದೀವಿಗೆ ಹಚ್ಚಿ। ನಂಬಿಕಿಲ್ಲದ ಸಂಸಾರ ಮಾಡಿದೆನೆ ಸೂವಿಯಾ ಬೀಬಿ॥ ಪಲ್ಲ॥ ತನುವೆಂಬ ಕಲ್ಲಿನೊಳು ಮನವೆಂಬೊ ಧಾನ್ಯವ ತುಂಬಿ। ವನವನದು ನವಬ್ಯಾಳಿ ಬೀಸಿದೆನೆ ॥ ೧ ॥ ಅಷ್ಟಕರ್ತೃಗಳೆಂಬೊ ಅಷ್ಟನವಧಾನ್ಯವ ತಂದು। ಕುಟ್ಟಿಕಟ್ಟಿ ಕಜ್ಜಾಯ ಕರದೆನೆ ॥ ೨ ॥ ಅಷ್ಟಕರ್ತೃಗಳೆಂಬೊ ಕಾಲವನ್ನುಳುಹಿ ನಾನು। ನಿಷ್ಠೆಯಿಂದಲಿ ಅನ್ನವ ಬಾಗಿದೆನೆ ॥ ೩ ॥ ಅಷ್ಟರೊಳಗೆನ್ನ ಗಂಡ ಬಂದು ಆಡುವ ಮಡಿಕೆಯ ಒಡದು। ಮುಟ್ಟಿ ಮುರಿದು ಮೂಲೆಗೆ ಹಾಕಿದನೆ॥ ॥ ೪ ॥ ಉಡುವ ಶೀರೆಯ ಶೆಳದು ಗಿಡದ ತೊಪ್ಪಲಸುತ್ತಿ। ತಿರಿಗಿ ಬಾರದ್ಹಾಂಗೆ ಮಾಡಿದನೆ॥ ೫ ॥ ಮಾಡಿದೆ ಒಗತನವ ನಂಬಿಕಿಲ್ಲದ ಸಂಸಾರವನೆಚ್ಚಿ। ಕೂಡಿದೆ ಪುರಂದರವಿಠಲನ್ನ ದಾಸರ ॥ ೬ ॥ ಶ್ರೀಃ ॥

## ೫೭. ರಾಗ ಮುಖಾರಿ, ಝಂಪೆತಾಳ.

ತ್ರಾಪಡದು ಬಂದುದಕೆ ಉಪಾಯವೇನು ॥ ಪಲ್ಲ॥ ಕೋಪದಲಿ ಶ್ರೀಹರಿಗೆ ಶಾಪಿಸಿದರೇನು ॥ ಅನುಪಲ್ಲ॥ ಅನ್ನ ವಸ್ತ್ರ ಇಲ್ಲವೆಂದು ಅತಿಕ್ಲೇಶಬಟ್ಟರೇನು। ಧ್ಯಾನದೌಲತ್ತು ಬೇಡಿ ಧೊರೆಗಳಿದ್ದರೇನು ॥ ತನ್ನ ತಲೆಯಡಿಮಾಡಿ ತಪವು ಮಾಡಿದರೇನು। ಎಣ್ಣೆ ಹಚ್ಚಿ ಹುಡಿಯೊಳ್ಹೊರಳಾಡಿದರೇನು ॥ ೧ ॥ ಸರಿಯ ಸುಜನರ ಕಂಡು ಸಂಕಟವಬಟ್ಟರೇನು। ಬರಿದೆ ನಿಂದೆಯ ಮಾಡಿ ಭ್ರಷ್ಟನಾದರೇನು ॥ ಇರುಳು ಹಗಲೊಂದಾಗಿ ಮದದಲ್ಲಿ ಇದ್ದರೇನು। ಅರಿಯದಾ ಮನುಜರಿಗೆ ಅಲ್ಪರಿದರೇನು॥ ೨ ॥ ಕಂಡ ದೈವಂಗಳಿಗೆ ಕರವ ಮುಗಿದಾರೇನು। ಚಂಡಿತನದಲಿ ಜಗವ ಚರಿಸಿದರೇನು ॥ ಭೂ। ಮಂಡಲಕೆ ಅಧಿಪತಿ ಪುರಂದರವಿಠಲನ್ನ। ಕೊಂಡಾಡು ಇದಕೆ ನೀ ಸಂದೇಹವೇನು ॥ ೩ ॥ ಶ್ರೀಃ ॥

### ೫೮. ರಾಗ ಹುಸೇನಿ, ಆದಿತಾಳ.

ಎಲ್ಲರು ಮಾಡುವದು ಹೊಟ್ಟೆಗಾಗಿ । ಗೇಣು । ಬಟ್ಟೆಗಾಗಿ ॥ ಪಲ್ಲ ॥ ಶಿರಿ । ವಲ್ಲಭನ ಭಜಿಸುವದು ಮುಕ್ತಿಗಾಗಿ ॥ ಅನುಪಲ್ಲ ॥ ಪಲ್ಲಕ್ಕಿಯ ಹೊರುವದು ಹೊಟ್ಟೆಗಾಗಿ । ದೊಡ್ಡ । ಮಲ್ಲರೊಡನಾಡುವದು ಹೊಟ್ಟೆಗಾಗಿ ॥ ಸುಳ್ಳಾಗಿ ಪೊಗಳುವದು ಹೊಟ್ಟೆಗಾಗಿ । ಶಿರಿ । ವಲ್ಲಭನ ಧ್ಯಾನವು ಮುಕ್ತಿಗಾಗಿ ॥ ೧ ॥ ಧೊರೆತನ ಮಾಡುವದು ಹೊಟ್ಟೆಗಾಗಿ । ಕರಿ । ತುರಗವೇರುವದು ಹೊಟ್ಟೆಗಾಗಿ ॥ ದುರಿತವ ಮಾಡುವದು ಹೊಟ್ಟೆಗಾಗಿ । ಶಿರಿ । ಹರಿಯ ಭಜಿಸುವದು ಮುಕ್ತಿಗಾಗಿ ॥ ೨ ॥ ಬೆಟ್ಟವ ಹೊರುವದು ಹೊಟ್ಟೆಗಾಗಿ । ಗಟ್ಯಾಗಿ ಕೂಗುವದು ಹೊಟ್ಟೆಗಾಗಿ ॥ ದಿಟ್ಟವಾಗಿ ನಮ್ಮ ಶ್ರೀಪುರಂದರ । ವಿಟ್ಠಲನ್ನ ಧ್ಯಾನವು ಮುಕ್ತಿಗಾಗಿ ॥ ೩ ॥

### ೫೯. ರಾಗ ನಾದನಾಮಕ್ರಿಯೆ, ಅಟತಾಳ.

ಕೋತಿ ಹಾಗೆ ಕುಣಿದಾಡಬೇಡ । ರೀತಿಮಾರ್ಗವ ಹಿಡಿಯೆಲೊ ಮೂಢ ॥ ಪಲ್ಲ ॥ ಆತುರ ಹಚ್ಚಿ ಕೂಗಾಡಬೇಡ । ಪಾತಕ್ಕೆ ಈ ಜನ್ಮ ಬಿಡದಿರೋ ಮೂಢ ॥ ಅನುಪಲ್ಲ ॥ ಹಳ್ಳೂರು ಕೇರ್ಯಾಗೆ ಇರುವದು ಹಂದಿ । ನಾನಾ ಜನ್ಮವ ತಿರುಗುತ ಬಂದಿ ॥ ಇಷ್ಟು ಸಂಸಾರವ ಮರೆ ಮಾಡಿಕೊಂಡಿ । ಮುಪ್ಪಿನ ಕಾಲಕ್ಕೆ ಅವಿಚಾರಗೊಂಡಿ ॥ ೧ ॥ ಹೆಂಡರು ಮಕ್ಕಳ ಪ್ರಪಂಚಕ್ಕಾಗಿ । ದುಡಿದು ಹಾಕಿದ್ಯೊ ಮುದಿಕೋಣನಾಗಿ ॥ ಮಡಿದು ಹೋಗುವಾಗ ದಾರಿಲ್ಲೊ ಗೂಗಿ । ನಿನ್ನೊಳು ನೀನೆ ತಿಳಿದುಕೋ ಕಾಗಿ ॥ ೨ ॥ ರಾಯರು ಇರುವರು ಮದಗಜದಂತೆ । ಬಾಗಿ ನಡಿತೀರೊ ಬಿಡಿಸೂಳೆಯಂತೆ ॥ ಇಷ್ಟು ಸಂಸಾರ ಸ್ಥಿರವಿಲ್ಲದಂತೆ । ಪುರಂದರವಿಠಲ ರಾಯ ಪದಮಾಡಿದಂತೆ ॥ ೩ ॥ ಶ್ರೀಃ ॥

### ೬೦. ರಾಗ ಮುಖಾರಿ, ಝಂಪೆತಾಳ.

ಜ್ಞಾನವಂತಗೆ ವಿಧಿಕಾಡುವದು ಸತ್ಯ । ಅ । ಜ್ಞಾನ ಮೂಢರಿಗೆ ಹರಿತನದ ಬಲವು ॥ ಪಲ್ಲ ॥ ಚಂದ್ರನಿಗೆ ವಿಧಿಕಾಡಿ ಗ್ರಹಣ ನುಂಗುವದ್ಯಾತು ।

ಇಂದ್ರನಿಗೆ ವಿಧಿಕಾಡಿ ಭಂಗಬಡಿಸಿತು ॥ ಚಂದದಲಿ ಪಾಂಡವರ ವನವಾಸ ಮಾಡಿಸಿತು । ಅಂದು ಲಲನೆ ಸೀತೆಯನ್ನ ಲಂಕೇಲಿಡಿಸಿತು ॥ ೧ ॥ ಹಿಂದಕ್ಕೆ ಹರಿಶ್ಚಂದ್ರನರಣ್ಯಾವ ಸೇರಿಸಿತು । ಮಡದ್ಯಾಗಿ ಕಾಡಿತೋ ಕಂಬಂಟಿಗೆ ॥ ದುಂದದಿಂದ ಈಶ್ವರನ ಸುಡುಗಾಡ ಸೇರಿಸಿತು । ಇನ್ನು ವಿಧಿಯನು ನೋಡು ನರರ ಪಾಡೇನು ॥ ೨ ॥ ವಿಧಿಕಾಡೊ ಕಾಲಕ್ಕೆ ಇಲ್ಲದಪವಾದ ಬಂತು । ಕಲಿಸಿತೊ ಸುಳ್ಳು ಕಳವು ಹಾದರವ ॥ ವಿಧಿಗೊಳಗಾಗದಾ ನರರು ಮತ್ತಿಲ್ಲ । ವಿಧಿಗೆದ್ದನೊ ಪುರಂದರಾವಿಠಲ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೬೧. ರಾಗ ಬಿಲಹರಿ, ಅಟತಾಳ.

ಶೃಂಗಾರವಾಗಿದೆ ಶ್ರೀಹರಿಯ ಮಂಚ ॥ ಪಲ್ಲ ॥ ಅಂಗನೆ ರುಗ್ಮಿಣಿ ಅರಸನಾ ಮಂಚ ॥ ಅನುಪಲ್ಲ ॥ ಬಡಿಗಿ ಮುಟ್ಟದ ಮಂಚ ಮಡುವಿನೊಳಿಹ ಮಂಚ । ಮೃಡನ ತೋಳಿಲಿ ಅಡಗಿರುವ ಮಂಚ ॥ ಸಡಗರವುಳ್ಳ ಮಂಚ ಹೆಡೆಯುಳ್ಳ ಹೊಸಮಂಚ । ಪೊಡವಿಗೊಡೆಯ ಪಾಂಡುರಂಗನ ಮಂಚ ॥ ॥ ೧ ॥ ಕಾಲಿಲ್ಲದಿಹ ಮಂಚ ಗಾಳಿನುಂಗುವ ಮಂಚ । ತೋಳು ಬಿಳುಪಿನ ಮಂಚ ವಿಷದ ಮಂಚ ॥ ಕಾಳಗದೊಳರ್ಜುನನ ಮುಕುಟ ಕೆಡಹಿದ ಮಂಚ । ಕೇಳು ಪರೀಕ್ಷಿತನ ಕೊಂದುದೀ ಮಂಚ ॥ ೨ ॥ ಕಣ್ಣು ಕಿವಿಯಾದ ಮಂಚ ಬಣ್ಣ ಬಿಳುಪಿನ ಮಂಚ । ಹೊನ್ನಪೆಟ್ಟಿಗೆಯೊಳು ಅಡಗುವ ಮಂಚ ॥ ಹುಣ್ಣಿಮೆ ಚಂದ್ರನ ಬಣ್ಣಕೆಡಗಿದ ಮಂಚ । ಕನ್ನೆ ಮಹಾಲಕ್ಷ್ಮಿಯರಸನ ಮಂಚ ॥ ೩ ॥ ಹಕ್ಕಿಗೆ ಹಗೆಮಂಚ ರೊಕ್ಕಮುಕ್ಕದ ಮಂಚ । ರಕ್ಕಸಾರಿ ಪಾಂಡುರಂಗನ ಮಂಚ ॥ ಸಿಕ್ಕಿಲ್ಲದೀ ಮಂಚ ಶ್ರೀಲಕ್ಷ್ಮೀಪತಿ ಮಂಚ । ಪೊಡವಿಗೊಡೆಯ ಪಾಂಡುರಂಗನ ಮಂಚ ॥ ೪ ॥ ಅಂಕುಡೊಂಕಿನ ಮಂಚ ಅನಂತಕಾಲಿನ ಮಂಚ । ಶಂಕರನ ತೋಳಿಗೆ ಪದಕದ ಮಂಚ ॥ ಶಂಕೆಯೊಳಸುರರ ಸಂಹರಿಸಿದ ಮಂಚ । ಪಂಕಜಾಕ್ಷ ಮುಕುಂದ ಪವಡಿಪ ಮಂಚ ॥ ೫ ॥ ಹುತ್ತದೊಳಿಹ ಮಂಚ ಧರೆಯ ಪೊತ್ತಿಹ ಮಂಚ । ಹೆತ್ತ ಮಕ್ಕಳಿಗೆ ಹೆಸರಿಡುವ ಮಂಚ ॥ ಹತ್ತಬಾರದ

ಮಂಚ ಹತ್ತಲೀಸದ ಮಂಚ । ಚಿತ್ತಜಪಿತ ತಾನು ಪವಡಿಪ ಮಂಚ ॥ ॥ ೬ ॥ ಏಳು ಹೆಡೆಯುಳ್ಳ ಮಂಚ ಬಹಳ ಮೃದುವಿನ ಮಂಚ । ಧ್ಯಾನ ಮಾತ್ರದಿ ನಾರದಂಗೊಲಿದ ಮಂಚ॥ ನಾರಾಯಣನ ಮಂಚ ಶ್ರೀಲಕ್ಷ್ಮೀ ಪತಿ ಮಂಚ । ಸ್ವಾಮಿ ಶ್ರೀಪುರಂದರವಿಠಲನ ಮಂಚ ॥ ೭ ॥ ಶ್ರೀಃ ॥

## ೬೨. ರಾಗ ಧನಾಸರಿ, ಮಟ್ಟೆತಾಳ.

ಮುಸುರೆ ತೊಳೆಯಬೇಕು । ಈ ಮನಸಿನ । ಮುಸುರೆ ತೊಳೆಯ ಬೇಕು ॥ ಪಲ್ಲ ॥ ಮುಸುರೆ ತೊಳೆಯಬೇಕು । ಗುಸುಗುಸು ಬಿಡಬೇಕು । ಈಶ ಪ್ರೇರಣೆಯೆಂಬೊ । ಹಸಿಯ ಹುಲ್ಲನು ಹಾಕಿ ॥ ಅನುಪಲ್ಲ ॥ ಅಷ್ಟ ಮದದಿಂದ ಸುಟ್ಟ ಈ ಪಾತ್ರೆಯ । ವಿಷ್ಣುನಾಮವೆಂಬೊ ಕೃಷ್ಣಾನದಿ ಯಲ್ಲಿ ॥ ೧ ॥ ಕಾಮಕ್ರೋಧದಿಂದ ಬೆಂದ ಈ ಪಾತ್ರೆಯ । ರಾಮಕೃಷ್ಣ ರೆಂಬೊ ಹೇಮಾನದಿಯಲ್ಲಿ ॥ ೨ ॥ ವಿಷವೆಂಬೊ ಪಾತ್ರೆಯ ಮುಸುರೆಯ ತೊಳದಿಟ್ಟು । ಬಿಸಜಾಕ್ಷ ಪುರಂದರವಿಠಲಗರ್ಪಿಸೊ ನಿತ್ಯ ॥ ೩ ॥ ಶ್ರೀಃ ॥

## ೬೩. ರಾಗ ವರಾಳಿ, ಝಂಪೆತಾಳ.

ಎಂತಾದರು ಚಿಂತೆ ಬಿಡದು । ನಿ । ಶ್ಚಿಂತನಾದವನಾನೊಬ್ಬರನು ಕಾಣೆ॥ ॥ ಪಲ್ಲ ॥ ಬ್ರಹ್ಮಗೆ ಶಿರಹೋಗಿ ಭಿನ್ನವಾದಾ ಚಿಂತೆ । ರಕ್ಕಸರ ಗುರುವಿಗೆ ಕಣ್ಣಿಲ್ಲದ ಚಿಂತೆ ॥ ಮನ್ಮಥಗೆ ಶಿರವಳಿದು ಭಸ್ಮವಾದ ಚಿಂತೆ। ಮುಕ್ಕಣ್ಣ ಶಿವನಿಗೆ ತಿರಿದುಂಬೊ ಚಿಂತೆ ॥ ೧ ॥ ಕಾಮಧೇನುವಿಗೆ ಕರಕೊಳ್ಳುವರೆಂಬ ಚಿಂತೆ । ಕಾಮಿನಿಗೆ ಸತ್ಪುರುಷರು ಸಿಕ್ಕದ ಚಿಂತೆ ॥ ರಾಜ್ಯವಾಳುವ ಧೊರೆಗೆ ಪರರಾಜ್ಯದ ಧೊರೆ ಚಿಂತೆ । ಶ್ಯಾನಭಾಗನಿಗೆ ಲೆಕ್ಕವ ಬರೆವ ಚಿಂತೆ ॥ ೨ ॥ ಧರ್ಮನಿಷ್ಠರಿಗೆ ಸುಖದೊಳಿರುವೊ ಚಿಂತೆ । ದುಷ್ಕರ್ಮಿ ಗಳಿಗೆ ಪರರ ಕೆಡಿಸುವೊ ಚಿಂತೆ॥ ತಮ್ಮ ಅರ್ಜುನನಿಗೆ ವೈರಿಯ ಕೊಲ್ಲುವ ಚಿಂತೆ। ಅಣ್ಣ ಭೀಮನಿಗೆ ಅನ್ನ ಸಾಲದ ಚಿಂತೆ ॥ ೩ ॥ ಭಕ್ತರಿಗೆ ಗುರು ವಿನಲಿ ಮುಕ್ತಿಪಡುವೊ ಚಿಂತೆ । ಮುಕ್ತರಿಗೆ ಹರಿಯ ದರ್ಶನದ ಚಿಂತೆ ॥ ಯುಕ್ತಿ ಬಲ್ಲವರಿಗೆ ವಿವೇಕವಾಡುವ ಚಿಂತೆ । ನಮ್ಮ ಪುರಂದರವಿಠಲಗೆ ನಮ್ಮೆಲ್ಲರ ಸಲಹುವ ಚಿಂತೆ ॥ ೪ ॥ ಶ್ರೀಃ ॥

## ೬೪. ರಾಗ ಬಿಲಹರಿ, ಅಟತಾಳ.

ಹರಿ ಹರಿ ನಿನ್ನನು ವಲಿಸಲು ಬಹುದು । ನರಜನರೊಲಿಸೋದು ಬಲು ಕಷ್ಟ ॥ ಪಲ್ಲ ॥ ಸರಿಬಂದಂತೆ ಆಡುವ ಜನರಿಗೆ । ಕಡೆತನಕಿರುವದು ಕಲಿ ಕಷ್ಟಾ ॥ ಅನುಪಲ್ಲ ॥ ಸುಮ್ಮನೆ ಯಿದ್ದರೆ ಸೇರರು ಸಖರು । ಗಮ್ಮನಾತ ನೆಂತೆಂಬೊರುನ್ಮಯದಿಂದ ॥ ಬಹಳನ್ನವನುಂಡರೆ ಭೂತ ಪ್ರಾಣಿ ಇವ ನೆಂಬೊರು । ಕಮ್ಮುಂಡರೆ ಕಡು ಲೋಭಿಯೆಂಬೊರು । ಉಣದಿದ್ದರೆ ರೋಗ್ಯೆಂಬೊರಯ್ಯ ॥ ೧ ॥ ಸುಮ್ಮನೆ ಇದ್ದರೆ ಬಹಳ ಗರುವಿಕೆ ಆತಗೆಂ ಬೊರು । ಹೊರಬಿಚ್ಚಾಡಲು ಬಾಯಿಬಡಿಕನೆಂಬೊರು ॥ ಆಡದಿದ್ದರೆ ಮೂಕನೆಂಬೊರಯ್ಯ ॥ ೨ ॥ ಒಗದ ವಸ್ತ್ರವನು ಶುದ್ಧಾಗಿ ಹೊದ್ದರೆ । ಸುಳುಕೋಕಿನವನಿವನೆಂಬೊರು ॥ ನಗೆ ಮಾಸಿದರೆ ಹೇಸಿಯೆಂಬೊರು । ಹೊದಿಯದಿದ್ದರೆ ಹುಚ್ಚನೆಂಬೊರಯ್ಯ ॥ ೩ ॥ ಸತಿಯಳ ಸಂಗದಿ ಸೌಖ್ಯ ವಿದ್ದರೆ । ಸಲಿಗೆಕೊಟ್ಟ ಕೋತ್ಯೆಂಬೊರು ॥ ವ್ರತದ ನಾರೇರ ಸಂಗವ ಬಿಟ್ಟರೆ ನಪುಂಸಕನೆಂತೆಂಬೊರು । ಅರಿಯದಿದ್ದರೆ ದಡ್ಡನೆಂಬೊರಯ್ಯ ॥ ॥ ೪ ॥ ದಡಬಡಿ ಇದ್ದರೆ ಠೊಣ್ಯನೆಂಬೊರು । ತೆಳುವಿದ್ದರೆ ರೋಗಿಷ್ಟನೆಂ ಬೊರು ॥ ಗಳಿಸಿ ಗಳಿಸಿ ಧನವಂತನಾದರೆ । ಪರರ ಒಡವೆ ಕೈಸೇರಿತೆಂ ಬೊರು । ಕಡೆಹಾಯಿಸೊ ಯೆನ್ನ ಕಠಿಣ ಪಂಢರಪುರ । ದೊಡೆಯ ಶ್ರೀ ಪುರಂದರವಿಠಲ ಕಡೆ ತೋರೈ ॥ ೫ ॥ ಶ್ರೀಃ ॥

## ೬೫. ರಾಗ ನಾದನಾಮಕ್ರಿಯೆ, ಝಂಪೆತಾಳ.

ಏನಂದಳೈಯ ಸೀತೆ । ಹನುಮ ನಿನಗೆ । ಏನುಡಿದಿಹಳು ಪ್ರೀತೆ ॥ ಪಲ್ಲ ॥ ಚೆನ್ನಿಗ ಚೆಲುವನೆ ಕೇಳೊ । ಜಾನಕಿಯು । ನಿನ್ನ ಬಿಟ್ಟಿರಲಾರಳು ॥ ನಿನ್ನಿರುಳು ನೀ ನೀಲಕುಂತಳೆ ಕನಸಿನಲಿ । ಚೆನ್ನಾಗಿ ನಿಂತಿಹಳೊ ರಾಮ ॥ ೧ ॥ ಸ್ವಾಮಿ ರಾಯರ ಪಾದವ । ಎಲೆ ಕಪಿಯೆ । ನಾನೆಂತು ಬಿಟ್ಟಿರಲಿ ॥ ದಾನವನ ಶಿರವರಿದು ಲಂಕೆಯ ಪುರವನ್ನು । ದಹನವನು ಮಾಡೆಂದಳೊ ರಾಮ ॥ ೨ ॥ ಎಲ್ಲಿಂದ ಬಂದೆ ಹನುಮ । ನೀ ಯೆನ್ನ । ಸೊಲ್ಲ ಕೇಳೋ ಪ್ರೇಮ ॥ ವಲ್ಲಭನ ಕಾಣದೆ ನಿಮಿಷ ಯುಗವಾಗಿದೆ ।

ನಿಲ್ಲಲಾರೆ ಯೆಂದಳು ರಾಮ ॥ ೩ ॥ ಚಿಂತಿಸುತ ಬಡವಾದಳೊ । ಜಾನಕಿಯು । ಕಾಂತೆ ತಾನಾಗಿಹಳೊ ॥ ಅಂತರಂಗದಿ ಅನಂತ ಅನಂತ ಎನುತ । ಭ್ರಾಂತಿಲಿ ಮರುಗುತಿಹಳೋ ರಾಮ ॥ ೪ ॥ ಆಂಜನೆಯ ತನಯ ಕೇಳೊ । ನೀ ಪೋಗಿ । ಕಂಜನಾಭನಿಗೆ ಹೇಳೊ ॥ ಕುಂಜರನ ಕಾಯ್ದ ಶ್ರೀಪುರಂದರವಿಠಲನ್ನ । ಪಂಜರದ ಅರಗಿಣಿ ಯೆಂದಳು ರಾಮ ॥ ೫ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೬೬. ಗದ್ಯ.

(೧) ಅನಂತಕೋಟಿಬ್ರಹ್ಮಾಂಡನಾಯಕ (೨) ರಮಾಬಹ್ಮರುದ್ರೇಂದ್ರಾದಿವಂದ್ಯ (೩) ಭಕ್ತವತ್ಸಲ (೪) ಭವರೋಗವೈದ್ಯ (೫) ಶರಣಾಗತವಜ್ರಪಂಜರ (೬) ಆಪದ್ಬಾಂಧವ (೭) ಅನಾಥಬಂಧೋ (೮) ಅನಿಮಿತ್ತಬಂಧೋ (೯) ಪತಿತಪಾವನ (೧೦) ಮಹಾರೋಗನಿವಾರಣ (೧೧) ಮಹಾದುರಿತನಿವಾರಣ (೧೨) ಮಹಾಭಯನಿವಾರಣ (೧೩) ಮಹಾಬಂಧವಿಮೋಚನ (೧೪) ಭಯಕೃದ್ಭಯವಿನಾಶನ (೧೫) ಕೃಪಾವಾರಿಧಿ (೧೬) ದೇವದೇವೋತ್ತಮ (೧೭) ದೇವಶಿಖಾಮಣಿ (೧೮) ಕಪಟನಾಟಕಸೂತ್ರಧಾರ (೧೯) ನಿತ್ಯರೊಳು ನಿತ್ಯ (೨೦) ಸತ್ಯಸಂಕಲ್ಪ (೨೧) ಮುಕ್ತಾಮುಕ್ತನಿಯಾಮಕ (೨೨) ಮೋಕ್ಷಧರ (೨೩) ಸುವೈಕುಂಠಪತಿ (೨೪) ವೈಕುಂಠವಿಹಾರಿ (೨೫) ತ್ರಿಧಾಮಾ (೨೬) ತ್ರಿಗುಣವರ್ಜಿತ (೨೭) ಜಗಜ್ಜನ್ಮಾದಿಕಾರಣ (೨೮) ಜಗತ್ಪತೇ (೨೯) ಜಗದತ್ಯಂತಭಿನ್ನ (೩೦) ಜಗದೀಶ (೩೧) ಜಗದುದ್ಧಾರ (೩೨) ಜಗತ್ಸ್ವಾಮಿ (೩೩) ಜಗದ್ವಿಲಕ್ಷಣ (೩೪) ಜಗನ್ನಾಥ (೩೫) ವಿಶ್ವಕುಟುಂಬಿ (೩೬) ವಿರಾಟಮೂರ್ತಿ (೩೭) ಹೇಮಂಗಳಾಂಗ (೩೮) ಹೇ ಶುಭಾಂಗ (೩೯) ಪರಮಮಂಗಳಮೂರ್ತಿ (೪೦) ಕೋಮಲಾಂಗ (೪೧) ನೀಲಮೇಘಶ್ಯಾಮ (೪೨) ಇಂದುವದನ (೪೩) ಬಹುಸುಂದರ (೪೪) ಇಂದಿರಾವಂದಿತಚರಣ (೪೫) ವೃಕೋದರವಂದ್ಯ (೪೬) ಕೇಶವಾದಿರೂಪ (೪೭) ಅಜಾದಿರೂಪ (೪೮) ವಿಶ್ವಾದಿರೂಪ

(೪೯) ಆತ್ಮಾದಿರೂಪ (೫೦) ಅನಿರುದ್ಧಾದಿರೂಪ (೫೧) ಅನ್ನಮಯಾದಿ ರೂಪ (೫೨) ಅನೇಕಮಂತ್ರಪ್ರತಿಪಾದ್ಯ (೫೩) ಸರ್ವಸಾರಭೋಕ್ತ (೫೪) ಅಷ್ಟೈಶ್ವರ್ಯಪ್ರದಾತಾ (೫೫) ಓಂಕಾರಶಬ್ದವಾಚ್ಯ (೫೬) ವಿಶಿಷ್ಟತಾರ ತಮ್ಯವಾಚ್ಯ (೫೭) ಅನಂತಾನಂತಶಬ್ದವಾಚ್ಯ (೫೮) ಅಣುಮಹದ್ರೂಪ (೫೯) ಶಂಖಚಕ್ರಪೀತಾಂಬರಧಾರಿ (೬೦) ಕಮಲಾಕ್ಷ (೬೧) ಕಮಲ ನಾಭ (೬೨) ವೈಜಯಂತಿವನಮಾಲಾಶೋಭಿತ (೬೩) ಕೌಸ್ತುಭಭೂಷಿತ (೬೪) ಸುವರ್ಣವರ್ಣ (೬೫) ನವರತ್ನಕುಂಡಲಧಾರಿ (೬೬) ಕಸ್ತೂರಿ ಶ್ರೀಗಂಧಲೇಪನ (೬೭) ಗರುಡಾರೂಢಶೋಭಿತ (೬೮) ಕಾಮಧೇನು (೬೯) ಶ್ರೀವತ್ಸಲಾಂಛನ (೭೦) ಕಲ್ಪವೃಕ್ಷ (೭೧) ಚಿಂತಾಮಣಿ (೭೨) ಕ್ಷೀರಾಬ್ಧಿಶಾಯಿ (೭೩) ಶೇಷಶಾಯಿ (೭೪) ವಟಪತ್ರಶಾಯಿ (೭೫) ಖಗ ವಾಹನ (೭೬) ದೇಶಕಾಲಗುಣಾತೀತ (೭೭) ಅನಂತಬ್ರಹ್ಮ (೭೮) ಅನಂ ತಶಕ್ತಿ (೭೯) ಅನಂತಮೂರ್ತಿ (೮೦) ಅನಂತಕೀರ್ತಿ (೮೧) ಪುರಾಣ ಪುರುಷೋತ್ತಮ (೮೨) ಅಕ್ರೂರವರದ (೮೩) ಅಂಬರೀಷವರದ (೮೪) ನಾರದವರದ (೮೫) ಪ್ರಹ್ಲಾದವರದ (೮೬) ಗಜೇಂದ್ರವರದ (೮೭) ಮುಚುಕುಂದವರದ (೮೮) ಧ್ರುವವರದ (೮೯) ವಿಭೀಷಣವರದ (೯೦) ಕುಲಾಲಭೀಮಸಂರಕ್ಷಕ (೯೧) ಪುಂಡರೀಕವರದ (೯೨) ಪರಾಶರವರದ (೯೩) ಪಾರ್ಥಸಾರಥಿ (೯೪) ಪಾಪವಿದೂರ (೯೫) ಅರಿಜನಪ್ರಚಂಡ (೯೬) ಚಾಣೂರಮಲ್ಲಮುಷ್ಟಿಕಾಸುರಮರ್ದನ (೯೭) ಕಾಳಿಂದೀಕೂಲ ವನಕಂಠೀರವ (೯೮) ಮದನಗೋಪಾಲ (೯೯) ವೇಣುಗೋಪಾಲ (೧೦೦) ವೇಣುನಾದಪ್ರಿಯ (೧೦೧) ಷೋಡಶಸಹಸ್ರಗೋಪಿಕಾಪ್ರಿಯರವಿಲಾಸ (೧೦೨) ಅಹಲ್ಯಾಶಾಪವಿಮೋಚನ (೧೦೩) ದ್ರೌಪದೀಅಭಿಮಾನರಕ್ಷಕ (೧೦೪) ದುಷ್ಟಜನಮರ್ದನ (೧೦೫) ಶಿಷ್ಟಜನಪರಿಪಾಲನ (೧೦೬) ಮುಕುಂದ (೧೦೭) ಮುರಾರೀ (೧೦೮) ಕಂಸಾರೀ (೧೦೯) ಅಸುರಾರೀ (೧೧೦) ದೈತ್ಯಕುಲಸಂಹಾರ (೧೧೧) ಕ್ಷಾತ್ರಕುಲಾಂತಕ (೧೧೨) ಸೋಮ ಕಾಸುರಾಂತಕ (೧೧೩) ಹಿರಣ್ಯಾಕ್ಷಹಿರಣ್ಯಕಶಿಪುಸಂಹಾರ (೧೧೪) ರಾವಣಕುಂಭಕರ್ಣಮರ್ದನ (೧೧೫) ಶಿಶುಪಾಲದಂತವಕ್ರಶಿರಚ್ಛೇದನ

(೧೧೬) ರಘುಕುಲೋದ್ಭವ (೧೧೭) ದಶರಥಕೌಸಲ್ಯಾನಂದನ (೧೧೮) ಸಿಂಧೂರವರದ (೧೧೯) ಸೀತಾಪತೇಶ್ರೀರಾಮಚಂದ್ರ (೧೨೦) ಯದುಕುಲೋತ್ಪನ್ನ (೧೨೧) ಯದುಕುಲೋದ್ಧಾರಿ (೧೨೨) ಯದುಕುಲತಿಲಕ (೧೨೩) ಯದುಕುಲಶ್ರೇಷ್ಠ (೧೨೪) ವಸುದೇವದೇವಕೀನಂದನ (೧೨೫) ಯಶೋದಾಕಂದ (೧೨೬) ವೃಂದಾವನವಾಸಿ (೧೨೭) ಗೋಪಕುಮಾರ (೧೨೮) ಗೋಕುಲದ್ವಾರಕಾವಾಸ (೧೨೯) ಗೋವರ್ಧನೋದ್ಧಾರಿ (೧೩೦) ಕಾಲೀಯಮರ್ದನ (೧೩೧) ಪೂತನಾಪ್ರಾಣಾಪಹಾರಿ (೧೩೨) ಶಕಟಾಸುರಮರ್ದನ (೧೩೩) ಪಾಂಡವಬಂಧೋ (೧೩೪) ಪಾಂಡವಪರಿಪಾಲ (೧೩೫) ಪಾಂಡವಪ್ರಿಯ (೧೩೬) ಸುದಾಮಸಖ (೧೩೭) ರುಕ್ಮಿಣೀವಲ್ಲಭ (೧೩೮) ಸತ್ಯಭಾಮಾಪ್ರಿಯ (೧೩೯) ಗೋಪೀಜನಜಾರ (೧೪೦) ನವನೀತಚೋರ (೧೪೧) ಗೋಪಾಲಕೃಷ್ಣ (೧೪೨) ಗಂಗಾಜನಕ (೧೪೩) ಪ್ರಯಾಗಮಾಧವ (೧೪೪) ಕಾಶೀಬಿಂದುಮಾಧವ (೧೪೫) ಪಂಪಾಪತಿಗುಲುಗುಂಜಿಮಾಧವ (೧೪೬) ರಾಮೇಶ್ವರಸೇತುಮಾಧವ (೧೪೭) ಬದರೀನಾರಾಯಣ (೧೪೮) ಶ್ರೀರಂಗನಾಥ (೧೪೯) ವಡ್ಡಿಜಗನ್ನಾಥ (೧೫೦) ಉಡುಪಿ ಶ್ರೀಕೃಷ್ಣ (೧೫೧) ಮೇಲುಕೋಟೆಯ ಚೆಲುವರಾಯ (೧೫೨) ಬೇಲೂರ ಚನ್ನಿಗರಾಯ (೧೫೩) ಅಹೋಬಲ ನರಸಿಂಹ (೧೫೪) ಪಾಂಡುರಂಗವಿಠಲ (೧೫೫) ಶ್ರೀಶೈಲವಾಸ (೧೫೬) ಅರುಣಾಚಲನಿಲಯ (೧೫೭) ವೃಷಭಾಚಲವಿಹಾರಿ (೧೫೮) ಅನಂತಶಯನ (೧೫೯) ದರ್ಭಶಯನ (೧೬೦) ಕಪಿಲ (೧೬೧) ಹಯಗ್ರೀವ (೧೬೨) ದತ್ತಾತ್ರೇಯ (೧೬೩) ಶಿಂಶುಮಾರ (೧೬೪) ಧನ್ವಂತ್ರಿ (೧೬೫) ಮಮಸ್ವಾಮಿ (೧೬೬) ಸರ್ವಸ್ವಾಮಿ (೧೬೭) ಜಗದಂತರ್ಯಾಮಿ (೧೬೮) ಜಗದೀಶ (೧೬೯) ಪ್ರಾಣೇಶ (೧೭೦) ದ್ವಿಜಫಣಿಪಮೃಡೇಶ (೧೭೧) ಶ್ರೀರಮಣ (೧೭೨) ಭೂರಮಣ (೧೭೩) ದುರ್ಗಾರಮಣ (೧೭೪) ಶ್ರೀಲಕ್ಷ್ಮೀವೆಂಕಟರಮಣ (೧೭೫) ಭಾರತೀಶರಮಣ (೧೭೬) ಮುಖ್ಯಪ್ರಾಣಾಂತರ್ಗತ ಸೀತಾಪತೇ ಶ್ರೀರಾಮಚಂದ್ರ (೧೭೭) ಸಾಕ್ಷಾತ್ ಮನ್ಮಥ ಮನ್ಮಥ (೧೭೮) ಹರಿವಿಠಲ (೧೭೯) ಪುಂಡರೀಕವರದ ಪಾಂಡುರಂಗವಿಠಲ (೧೮೦) ಪುರಂದರವಿಠಲ ॥

# ಹೃದಯಕಮಲವಿವರ ಮಾನಸಪೂಜೆ.

೬೭. ರಾಗ ಭೈರವಿ, ಝಂಪೆತಾಳ.

ಎಲ್ಲಿ ವಿರಾಟಪೂಜೆ ಹೃದಯಕಮಲ। ಅಷ್ಟದಳ ಹೃಷಿಕೇಶ ನಾರಾಯಣಾ ಹಂಸಗಮನ॥ ಪಲ್ಲ॥ ತುಂದಿ ತುದಿಯಲ್ಲಿ ಕೇಸರದಲ್ಲಿ ಧುಮುಕಿ। ಕರ್ಣಿಕಾನಾಳದಲಿ ಕಮಲ ಮೂಲ। ನಾಭಿಗೆ ಹೃತ್ಕಮಲಕ್ಕೆಲ್ಲ ಹತ್ತು ಅಂಗುಷ್ಠ॥ ಕಮಲ ಕೋಮಲನಾಳ ಕಮಲ ಅಧೋಮುಖ। ಕಮಲ ಕದಳಿಪುಷ್ಪದಂತೆ ಕಮಲ ಚಂದ್ರಕಾಂತಿಯಂತೆ। ಕಮಲ ವಿಶಾಲದ ದಿಕ್ಕು ಕಮಲ ಸ್ವರ್ಣದಂತಿಹುದು॥ ೧॥ ಅಷ್ಟದಳ ಹೃತ್ಕಮಲ ಆದಕ್ಕೆ ಮೂವತ್ತೆರಡು ಕೇಸರ। ಅಷ್ಟರಲ್ಲಿ ಕರ್ಣಿಕಾನಾಳ ಅರಸಿ ಶ್ರೀಭೂದೇವಿಯು॥ ಅಷ್ಟಬಾಹು ಅಷ್ಟಾಯುಧಾ ಅಂಗುಷ್ಠ ಮಾತ್ರ ವಿಷ್ಣು। ಅಷ್ಟದಿಕ್ಪಾಲಕರು ಇರಲು ಅಲ್ಲಿ ಬ್ರಹ್ಮಾದಿಗಳಿಂದ॥ ೨॥ ಶ್ವೇತವರ್ಣ ಕೃತಯುಗದಿ ತ್ರೇತಾಯುಗದಿ ರಕ್ತವರ್ಣ। ಪೀತವರ್ಣ ದ್ವಾಪರದಿ ಪ್ರತಿ ಕೃಷ್ಣವರ್ಣ ಕಲಿಯುಗದಿ॥ ದಾತ ಧನುರ್ಗುಣ ಬಾಣಧರ ಚಕ್ರಗದೆಪದ್ಮ। ಆತುರ್ಯ ಮುಸಲ ಖಡ್ಗ ಅಷ್ಟಬಾಹುಗಳಲಿ॥ ೩॥ ಪೂರ್ವದಳದಿ ಪುಣ್ಯಮಯದಿ ಜೀವನಿರುವ। ಆರುಢಾಗ್ನೇಯದಳದಿ ಆಲಸ್ಯ ಆಕಳಿಕೆ ನಿದ್ರೆ॥ ತೋರುತಿಪ್ಪ ಯಮದಿಕ್ಕಿನಲಿ ತುಂಬಿದ ಕ್ರೋಧ। ಮಿಗೆ ಹರಿದಡೆ ನೈಋತ್ಯದಿ ಪಾಪಕೃತ್ಯ॥ ೪॥ ವರುಣದಿಕ್ಕಿನಲ್ಲಿ ವಿನೋದ ವಾಯುವ್ಯದಿ ಘನಮನಸು। ಕುರು ಕುಬೇರನ ದಿಕ್ಕಿನಲ್ಲಿಡುವನೂ ಅತಿ ಬುದ್ಧಿಯ॥ ತೆರಳಿ ಬಂದು ಈಶಾನ್ಯದಿ ದ್ರವ್ಯದಾನ ಮಾಡಿಸುವನದು। ದಿಕ್ಪಾಲಕರುಗಳಿಂದ ನಿಂತು ನಿಂತು ಬರುವ॥ ೫॥ ಜೀವಕ್ಕೆ ವೈರಾಗ್ಯವ ಜಗದೀಶನು ಮಧ್ಯ ಇದ್ದು। ಮೂವತ್ತೆರಡು ಕೇಸರದಿ ಮುಕುಂದ ಬರಲು ಜಾಗ್ರತೆ॥ ಭಾವವಿತ್ತು ಕರ್ಣಿಕೆಯಲ್ಲಿ ಬಂದು ಸ್ವಪ್ನಗಳ ತೋರಿ। ಹುವ್ವಿನಲಿ ಕಂಗಳ ಹೊಂದಿ ಸೂಸಿಸಿ ಇವನು॥ ೬॥ ಮಧ್ಯಕಮಲದಲಿ ಸೂರ್ಯ ಮಧ್ಯ ಸೂರ್ಯನಲಿ ಚಂದ್ರ। ಮಧ್ಯ ಚಂದ್ರನಲಿ ಅಗ್ನಿ ಮಧ್ಯ ತೇರು ಶೃಂಗಾರ॥ ಮಧ್ಯ ಜಗಲಿ ಕಲ್ಪವೃಕ್ಷ ಮಧ್ಯ ಮಂಟಪ। ಸ್ವರ್ಣದಿಂದಾ ಪ್ರಭೆ ಪೀಠಸಾಸಿರ

ಫಣೀಮಧ್ಯ ಶ್ರೀಭೂನಾರಾಯಣ ॥ ೭ ॥ ಹವಳಸ್ಫಟಿಕಕಂಬ ನೂರು ಹಾಟಕನವರತ್ನದಲೇರು । ಹವಣೆ ನಾಲ್ಕು ಮೂಲ ಜಗಲಿ ಹಲವು ರತ್ನ ದಲಿ ಹಾದು ॥ ವಿವಿಧ ಮುತ್ತಿನಗೊಂಚಲು ವಿಚಿತ್ರ ಧ್ವಜಪತಾಕಗಳು । ರವಿಕೋಟಿ ಪ್ರಕಾಶದಲಿ ರಥ ಹೊಳವುತಿರಲು ॥ ೮ ॥ ಮಲ್ಲಿಗೆ ಕುಂದ ಮಂದಾರ ಮರುಗ ಕೇತಕಿ ಸಂಪಿಗೆಯಲಿ । ಮಂಟಪ ಶೃಂಗಾರ ಅನೇಕ ಪೂವಿಲಿ ಮಂದಿರಾಸಲುವ ॥ ಕಲ್ಪವೃಕ್ಷದ ಕೆಳಗೆ ಸ್ವರ್ಣಪಟ ಸಿಂಹಾಸನಾ ಪ್ರಭೆ । ಯಲ್ಲಿ ಕೋಟಿಸೂರ್ಯಪ್ರಕಾಶ ಇರುವ ವಿಷ್ಣು ಚತುರ್ಭುಜದಿ ॥ ॥ ೯ ॥ ಅನೇಕ ಕೋಟಿಸೂರ್ಯಪ್ರಕಾಶ ಅಲ್ಲಿ ಮಕುಟಾಟೋಪ ಮಸ್ತಕ । ವನಜನಾಭಗೆ ಕಡಗಕಂಕಣ ವರದಾಭಯ ಹಸ್ತದಿ ॥ ಕನಕಾಂಗ ಕಸ್ತೂರಿ ಪ್ರೇಮ ಕರುಣಿ ಪ್ರಸನ್ನವದನ ಶುಭ । ಮನೋಹರ ದಯಾ ಮೂರ್ತಿ ಮಂದಹಾಸ ಮುಖಾಂಬುಜದಿ ॥ ೧೦ ॥ ಅಣಿಮಾದಿ ಅಷ್ಟೈ ಶ್ವರ್ಯ ಅದು ಮೂರ್ತಿಸಿ ಆರಾಧಿಸಲು । ಅಣಿವಾಗಿ ಬ್ರಹ್ಮರುದ್ರಾದ್ಯರು ಅನಾರಾರಂಜುಲ್ಲಿ ಮಾಡಲು ॥ ಕಣಿಯಾಗಿ ನಾರದಾದ್ಯರು ಕೈಮುಗಿದು ಗಾಯನ ಮಾಡಲು । ಕುಣಿವ ಊರ್ವಶಿ ರಂಭಾ ಮೇನಕೀ ತಿಲೋತ್ತ ಮೆಯರು ॥ ೧೧ ॥ ಸನಕಾದಿ ಯೋಗಿಗಳು ಸ್ತೋತ್ರಗಳು ಮಾಡಲು । ಮನುಜೇಶ್ವರರು ವಂದಿಸುತ ಮಾಗಧರು ಹೊಗಳಲು ॥ ಅನೇಕ ದಿವ್ಯಾ ಭರಣದಿ ಅಲ್ಲಿ ಕೈಕಂಕಣವುಭಯ ಪಾರ್ಶ್ವದಿ । ಕನಕ ಕಾಮಿನಿ ಛತ್ರ ಚಾಮರವ ಕಾಂತೇರಿಬ್ಬರು ಢಾಳಿಸಲು ॥ ೧೨ ॥ ದುರ್ವಿಜ್ಞೇಯ ದುರಾ ರಾಧ್ಯ ದುಷ್ಟಗಮ್ಯ ಜನಾರ್ದನಾ । ನಿರ್ವಿಘ್ನದಿ ಅಧೋಮುಖದಿ ರಜಾದಿ ನೇಲಲಷ್ಟಗಿಪ್ಪನ ॥ ಪೂರ್ವದಲಿ ಮಾನಸಪೂಜೆ ಉಪಾಪ್ತಿ ಅರ್ಜುನ ಕೇಳಲು । ಸರ್ವರಂತರ್ಯಾಮಿ ಕೃಷ್ಣ ಸ್ವಾಮಿ ಉಪಾಯವ ಪೇಳಿದ ॥ ॥ ೧೩ ॥ ಭಾವ ಪ್ರಾಣ ವ್ಯಾಹೃತಿ ವಾಯು ಬದ್ಧದಲಿ ಹೃತ್ಕಮಲ । ನೋವಿಲ್ಲದೆ ಅಧೋಮುಖದಿ ದಿನದಿನಕು ಉನ್ನತದಿ ಅರಳುವದು ॥ ಆವಾ ಹನವು ಆಸನವು ಅಂತರದಿ ಪಾದ್ಯವು । ದೇವಗರ್ಘ್ಯ ಆಚಮನಾದಿಗಳು ಉಪಚಾರಿಸೆ ॥ ೧೪ ॥ ಅತಳದಲಿ ಪಾದವಿಹುದು ಆ ಪದಾರ್ಥ ವಿತಳ ದಲಿ । ಸುತಳದಿಪ್ಪದು ಜಂಘೆಗಳು ಸೋಘ್ರಜಾನು ರಸಾತಳದಿ । ತತಿಲಿ

ಕೊಡೆ ಮಹಾತಳದಿ ತಳಾತಳದಿ ಗುಹ್ಯವಿಪ್ಪುದು । ಪ್ರತಿಯಿಲ್ಲದಾ ಕಟಿ ಬದಿಲಿ ಪಾತಾಳವಿಪ್ಪುದು ॥ ೧೫ ॥ ಭೂಲೋಕದಲಿ ಮಧ್ಯಮ ಭುವರ್ಲೋಕದಲಿ ಕುಕ್ಷಿ । ಮೇಲೆ ಸುವರ್ಲೋಕದಲಿ ಮೃದುಹೃದಯ ಶ್ರೀವತ್ಸ ॥ ಶ್ರೀಲೋಲರ ಕುಕ್ಷಿಗಳು ಸೇರಿಪ್ಪದು ಮಹರ್ಲೋಕದಿ । ಮ್ಯಾಲೆ ಕೌಸ್ತುಭ ಜನೋಲೋಕದಿ ಮತ್ತೆ ಕೊರಳಿಪ್ಪುದು ॥ ೧೬ ॥ ತಪೋಲೋಕದಿ ಲಲಾಟತಲೆ ಸತ್ಯಲೋಕದಲಿ । ವಿಪರೀತ ವಿರಾಟರೂಪ ವಿಶ್ವತೈಜಸ ಪ್ರಾಜ್ಞ ತುರ್ಯ॥ ಉಪೇಂದ್ರ ಎಪ್ಪತ್ತೆರಡು ಸಾಸಿರ ಉಪನಾಡಿಯುಲಿಪ್ಪ ಪಾರ್ಶ್ವನಾಗಿ । ಕಪಟನಾಟಕ ಸೂತ್ರಧಾರಿ ಕಾಣು ಪುರಂದರ ವಿಠಲ ॥ ೧೭ ॥ ಶ್ರೀಃ ॥

## ಶ್ರೀನಿವಾಸದೇವರು ಬೇಟೆಗೆ ಹೋದದ್ದು.

### ೬೮. ರಾಗ ಕಾಂಬೋಧಿ, ಏಕತಾಳ.

ಡಿಂಗುರವ ತೀಡಿ ಮೈಯೊಳು ಗಂಧಪೂಸಿದ । ಸ್ವಾಮಿ । ಗಂಧಪೂಸಿದ ॥ ೧ ॥ ಪುಣುಗು ಜವ್ವಾಜಿ ಕಸ್ತುರಿ ಹಚ್ಚಿದ । ಸ್ವಾಮಿ । ಕಸ್ತುರಿ ಹಚ್ಚಿದ ॥ ೨ ॥ ನೊಸಲ ಮೇಲೆ ಮೃಗನಾಭಿ ತಿಲಕ ಧರಿಸಿದ । ಸ್ವಾಮಿ । ತಿಲಕ ಧರಿಸಿದ ॥ ೩ ॥ ವಾರೆ ತುರುಬು ವಾರೆ ಜಡೆಯುಗೊಂಡೆ ಕಟ್ಟಿದ । ಸ್ವಾಮಿ । ಗೊಂಡೆ ಕಟ್ಟಿದ ॥ ೪ ॥ ಎಂಟು ಎಂಟು ಮುತ್ತಿನ ವಂಟಿ ಇಟ್ಟನೆ । ಸ್ವಾಮಿ । ವಂಟಿ ಇಟ್ಟನೆ ॥ ೫ ॥ ಕಂಠದಲ್ಲಿ ಕೌಸ್ತುಭ ಆಭರಣವಿಟ್ಟನೆ । ಸ್ವಾಮಿ । ಆಭರಣವಿಟ್ಟನೆ ॥ ೬ ॥ ಪಾದದಲ್ಲಿ ಹೊನ್ನಂದುಗೆ ನೂಪುರ ಇಟ್ಟನೆ । ಸ್ವಾಮಿ । ಬಾಪುರಿ ಇಟ್ಟನೆ ॥ ೭ ॥ ಕಿರುಗೆಜ್ಜೆ ಪಾಡಾಗಪೆಂಡೆ ಕಾಲಿಲಿಟ್ಟನೆ । ಸ್ವಾಮಿ । ಕಾಲಿಲಿಟ್ಟನೆ ॥ ೮ ॥ ಅಂಗುಲಿಗೆ ತಕ್ಕಂಥ ಉಂಗುರವಿಟ್ಟಾನೆ । ಸ್ವಾಮಿ ಹೊ । ನ್ನುಂಗುರವಿಟ್ಟನೆ ॥ ೯ ॥ ತೋಳಾರಕ್ಷೆ ಮಣಿಹಸ್ತ ಕಡಗ ಇಟ್ಟನೆ । ಸ್ವಾಮಿ । ಕಡಗ ಇಟ್ಟನೆ ॥ ೧೦ ॥ ಹಾರಪದಕ ಹುಲಿಯುಉಗುರು ವೈಜಯಂತಿಯು । ಕೊರಳೊಳ್ । ವೈಜಯಂತಿಯು ॥ ॥ ೧೧ ॥ ದುಂಡು ಮುತ್ತು ಕಟ್ಟಿ ಸರಿಗೆ ತಾಳಿ ಧರಿಸಿದ । ಸ್ವಾಮಿ । ತಾಳಿ ಧರಿಸಿದ ॥ ೧೨ ॥ ಬಂದಿ ಕಂಕಣ ಬಾಪುರಿ ವಂಕಿ ಇಟ್ಟನೆ । ಸ್ವಾಮಿ ।

ವಂಕಿ ಇಟ್ಟನೆ॥ ೧೩ ॥ ಶೃಂಗಾರದ ಜರತರದ ಅಂಗಿ ತೊಟ್ಟನೆ। ಸ್ವಾಮಿ। ಅಂಗಿ ತೊಟ್ಟನೆ॥ ೧೪॥ ಅಂಗದಲ್ಲಿ ಭಂಗಾರದ ಕವಚವಿಕ್ಕಿದ। ಸ್ವಾಮಿ। ಕವಚವಿಕ್ಕಿದ ॥ ೧೫ ॥ ದಿಟ್ಟ ವೆಂಕಟೇಶ ಬೇಟೆಯಾಡ ಹೊರಟನೆ। ಸ್ವಾಮಿ ಬೇಟೆ। ಯಾಡ ಹೊರಟನೆ ॥ ೧೬ ॥ ಪಟ್ಟೆವಾಳಿ ಶಾಮಿಯ ಕಸೆಯ ಬಿಗಿದನೆ। ಸ್ವಾಮಿ। ಕಸೆಯ ಬಿಗಿದನೆ॥ ೧೭ ॥ ಹುಡಿಯ ಕಟ್ಟಿ ನಡುವಿಗೆ ಕಠ್ಠಾಣಿ ಹೊಗಿಸಿದ। ಸ್ವಾಮಿ। ಕಠ್ಠಾಣಿ ಹೊಗಿಸಿದ ॥ ೧೮ ॥ ವಾರಿ ತುರುಬಿನ ನಾಯಕ ಬಾರದ್ಹೋದನೆ। ಸ್ವಾಮಿ। ಬಾರದ್ಹೋದನೆ॥ ॥ ೧೯ ॥ ಚೆಲುವ ಚೆನ್ನಿಗರಾಯನಾಗಿ ವನಕೆ ಹೊರಟನೆ। ಸ್ವಾಮಿ। ವನಕೆ ಹೊರಟನೆ ॥ ೨೦ ॥ ಜಗವೆಲ್ಲ ನೋಡುತಿರಲು ತೇಜಿಯೇರಿದ। ಸ್ವಾಮಿ। ತೇಜಿಯೇರಿದ ॥ ೨೧ ॥ ತ್ರಿಜಗವನ್ನೆ ಪಾಲಿಸೆಂದು ತೇಜಿ ಹಿಡಿದನೆ। ಸ್ವಾಮಿ। ವಾಜಿ ಹಿಡಿದನೆ ॥ ೨೨ ॥ ಗಟ್ಟಬೆಟ್ಟವನ್ನೆ ಸುತ್ತಿ ಕಷ್ಟಬಟ್ಟನೆ। ಸ್ವಾಮಿ। ಕಷ್ಟಬಟ್ಟನೆ ॥ ೨೩ ॥ ವೃಕ್ಷಮೂಲದಲ್ಲಿ ಮಿಂಚುತಿಹಳ ಕಂಡನೆ। ಸ್ವಾಮಿ। ಮಿಂಚುತಿಹಳ ಕಂಡಾನೆ ॥ ೨೪ ॥ ಸೋಲುಮುಡಿಯ ಸೋಗೆಕಣ್ಣ ವಾರೆನೋಟವ। ಅವಳ। ವಾರೆನೋಟವ ॥ ೨೫ ॥ ನೀಲವರ್ಣದ ಕೋಮಲಾಂಗಿ ಮೇಲೆ ಛಾಯವ। ಅವಳ। ಮೇಲೆ ಛಾಯವ ॥ ೨೬ ॥ ಎರಳೆಕಂಗಳಂತೆ ಕಣ್ಣ ತಿರುಗುತಿಹಳು। ಅವಳು। ಹೊಳೆಯುತಿಹಳು ॥ ೨೭ ॥ ಮೃಗವ ಕಂಡು ಶಿರವನೆತ್ತಿ ನೋಡುತಿಹಳು। ಅವಳು। ನೋಡುತಿಹಳು ॥ ೨೮ ॥ ಕುಂಜರಗಮನೆಯಂತೆ ತಿರುಗುತಿಹಳು। ಅವಳು। ಒಲವುತಿಹಳು ॥ ೨೯ ॥ ವನವ ಬಿಟ್ಟು ವನಕೆ ವನಕೆ ಹಾರುತಿಹಳು। ಅವಳು। ಹಾರುತಿಹಳು ॥ ೩೦ ॥ ಅವಳ ಕಂಡು ವೆಂಕಟೇಶ ಭ್ರಾಂತಿಬಟ್ಟನೆ। ಸ್ವಾಮಿ। ಭ್ರಾಂತಿಗೊಂಡನೆ ॥ ೩೧ ॥ ಅಡ್ಡದಾರಿಯಲ್ಲಿ ಮೋರೆ ನೋಡುತಿಹನೆ। ಸ್ವಾಮಿ। ನೋಡುತಿಹನೆ ॥ ೩೨ ॥ ದಾರಿಗಡ್ಡ ನಿಂದಿರಲಾರು ಹೀನರಾವುತ। ಎಲೊ। ಹೀನರಾವುತ ॥ ೩೩ ॥ ಪರನಾರಿಯರ ಕಂಡು ಮೋರೆ ಹ್ಯಾಗೆ ಮಾಡುತಿ। ಎಲೊ। ಹ್ಯಾಗೆ ಮಾಡುತಿ ॥ ೩೪ ॥ ಹೀನನಲ್ಲವೆ ನಿನ್ನ ಹುಡುಕಬಂದೆನೆ। ನಿನ್ನ। ಹುಡುಕ ಬಂದೆನೆ ॥ ೩೫ ॥ ನಿನ್ನ ಗುರುಕುಚಗಳ ಕಂಡು ಭ್ರಾಂತಿಗೊಂಡೆನೆ।

ನಾನು । ಭ್ರಾಂತಿಗೊಂಡೆನೆ ॥ ೩೬ ॥ ಲಂಡ ಪುಂಡರ ಮಾತ ಆಡದಿರೊ। ಎನ್ನ ಕೂ। ಡಾಡದಿರೊ ॥ ೩೭ ॥ ಕತ್ತಿ ಕಠಾರಿ ನಿನ್ನ ಸೇನೆಗಂಜೆನೊ। ನಾನು। ಸೇನೆಗಂಜೆನೊ ॥ ೩೮ ॥ ನಿನ್ನ ಬಿರುದ ಬಿಟ್ಟುಕೊಟ್ಟು ಬಾರಿ ಚುಂಚುಕಿ। ಬೇಗ। ಬಾರಿ ಚುಂಚುಕಿ ॥ ೩೯ ॥ ಬಾರಿ ಹೋಗೆ ಯೆನ್ನ ಲಿಕ್ಕೆ ಭಾಮೆಯೆ ನಾನು । ಎಲೊ । ಭಾಮೆಯೆ ನಾನು ॥ ೪೦ ॥ ನಿನ್ನ ಬಿಂಕ ಬಿಟ್ಟುಕೊಟ್ಟು ತಿರುಗೊ ರಾವುತ । ಅತ್ತ । ಸಾರೊ ರಾವುತ ॥ ॥ ೪೧ ॥ ನೀಲವೇಣಿ ಯೆನ್ನಕೂಡೆ ನಿಲ್ಲಲಾರೆಯೆ । ಯೆನ್ನೊಳ್ । ನಿಲ್ಲ ಲಾರೆಯೆ ॥ ೪೨ ॥ ನಿನ್ನ ಮುಖಪದ್ಮಗಳ ಕಂಡು ಭ್ರಾಂತಿಗೊಂಡೆನೆ । ನೀರೆ। ಭ್ರಾಂತಿಗೊಂಡೆನೆ ॥ ೪೩ ॥ ಹೀನಮಾತನಾಡದಿರೊ ಹೀನರಾವುತ। ಎಲೊ। ಹೀನರಾವುತ ॥ ೪೪ ॥ ವಾರಿಜಾಕ್ಷಿ ಯೆನ್ನಕೂಡೆ ವಾದ ಯಾತಕೆ। ಎಲೆ। ವಾದ ಯಾತಕೆ ॥ ೪೫ ॥ ಪ್ರೇಮದಿಂದ ಬಂದು ತೊಡೆಯ ಮೇಲೆ ಯೇರೆ ಚುಂಚುಕಿ। ಮೇಲೆ। ಯೇರೆ ಚುಂಚುಕಿ ॥ ೪೬ ॥ ತೊಡೆ ಯಮೇಲೆ ಏರಲಿಕ್ಕೆ ಮಡದಿಯೇ ನಾನು। ಎಲೊ। ಮಡದಿಯೇ ನಾನು ॥ ॥ ೪೭ ॥ ಹೀನಮಾತ ಆಡದಿರೊ ಹುಡುಗ ರಾವುತ। ಎಲವೊ। ತುಡುಗ ರಾವುತ ॥ ೪೮ ॥ ರಾಜ್ಯ ಭೂಮಿಗಳನು ಅಷ್ಟು ಕೊಡುವೆನು ನಾನು । ನಿನಗೆ । ಬಿಟ್ಟುಕೊಡುವೆನು ॥ ೪೯ ॥ ನಿನ್ನೊಡೆಯನೆಂದು ಪಾಲಿಸೆ ಚುಂಚುಕಿ। ಬೇಡಿ। ಕೊಂಬೆ ನಾಯಕಿ ॥ ೫೦ ॥ ರಾಜ್ಯಭೂಮಿಯಾಳ ಲಿಕ್ಕೆ ರಾಯನೇ ನಾನು। ಎಲೊ। ರಾಯನೆ ನಾನು ॥ ೫೧ ॥ ದೊಡ್ಡ ಅಡವಿ ಬೆಟ್ಟದೊಳಗೆ ಆಹಾರವೇನೊ। ಎಲೊ। ಆಹಾರವೇನೊ ॥ ೫೨ ॥ ಆಲದಂತಿಹ ಹಣ್ಣು ಮುಟ್ಟಬಾರದ ಹಣ್ಣು। ಮುಟ್ಟ। ಬಾರದ ಹಣ್ಣು ॥ ॥ ೫೩ ॥ ಮುದ್ದು ಸುರಿವ ಹೂ। ಬಹಳ। ಮುದ್ದು ಸುರಿವ ಹೂ ॥ ೫೪ ॥ ಕರೆಯಬಾರದಾ ಹಣ್ಣು ಕೈಗೆ ನೀಕಾದ । ಹಣ್ಣು । ಕೈಗೆ ಸೀಕಾದ ॥ ॥ ೫೫ ॥ ಎಷ್ಟು ಪೇಳ್ದರು ಕೇಳಲಿಲ್ಲ ಏನ ಮಾಡಲಿ। ಇ। ನ್ನೇನು ಮಾ ಡಲಿ ॥ ೫೬ ॥ ಅಡವಿಯೊಳಗೆ ದಾರಿಲ್ಲೆಂದು ಜುಲ್ಮೆಮಾಡಿದ। ಸ್ವಾಮಿ। ಜುಲ್ಮೆಮಾಡಿದ ॥ ೫೭ ॥ ಸ್ವಾಮಿಪುಷ್ಕರಣಿಯ ತೀರದಲ್ಲಿ ವಾಸಮಾಡಿದ। ಸ್ವಾಮಿ । ವಾಸಮಾಡಿದ ॥ ೫೮ ॥ ವರಹವತಾರ ತಾನೆಂದು ಅರಸ

ನಾದನೆ । ಸ್ವಾಮಿ । ಅರಸನಾದನೆ ॥ ೫ ॥ ಕೊಲ್ಹಾಪುರದಲ್ಲಿ ತನ್ನ ನಾರಿಯಿಟ್ಟನೆ । ಸ್ವಾಮಿ । ನಾರಿಯಿಟ್ಟನೆ ॥ ೬೦ ॥ ಬೆಟ್ಟ ನಡೆವರಿಲ್ಲವೆಂದು ಕೃಷ್ಣ ನಡೆದನೆ । ಸ್ವಾಮಿ । ಕೃಷ್ಣ ನಡೆದನೆ ॥ ೬೧ ॥ ಸ್ವಾಮಿ ವೆಂಕಟೇಶ ತಾನು ಬೇಟೆಯಾಡಿದ । ಸ್ವಾಮಿ । ಬೇಟೆಯಾಡಿದ ॥ ೬೨ ॥ ಅಪ್ಪವೆಂಕಟೇಶ ತಾನು ಒಪ್ಪದಿಂದಲೆ । ಸ್ವಾಮಿ । ಗಿರಿಗೆ ಬಂದನೆ ॥ ೬೩ ॥ ಶ್ರೀಶ ಪುರಂದರವಿಠಲನೆಂದು ಹಾಗೆ ನಿಂದನೆ । ಸ್ವಾಮಿ । ಹಾಗೆ ನಿಂದನೇ ॥ ೬೪ ॥

## ೬೯. ರಾಗ ಬಿಲಹರಿ, ಅಟತಾಳ.

ಯಾರಿಗೆ ಯಾರುಂಟು ಎರವಿನ ಸಂಸಾರ । ನೀರಮೇಲಣ ಗುಳ್ಳೆ ನಿಜವಲ್ಲ ಹರಿಯೇ ॥ ಪಲ್ಲ ॥ ಬಾಯಾರಿತು ಯೆಂದು ಬಾವಿನೀರಿಗೆ ಪೋದೆ । ಬಾವಿಲಿ ಜಲಬತ್ತಿ ಬರಿದಾಯ್ತು ಹರಿಯೆ ॥ ೧ ॥ ಬಿಸಿಲು ಗಾಳಿಗಾಗಿ ಮರದ ನೆರಳಿಗೆ ಪೋದೆ । ಮರಬಗ್ಗಿ ಶಿರದಮೇಲೊರಗಿತು ಹರಿಯೆ ॥ ॥ ೨ ॥ ಅಡವಿಯೊಳ್ಮನೆ ಮಾಡಿ ಗಿಡಕೆ ತೊಟ್ಟಿಲ ಕಟ್ಟಿ । ತೊಟ್ಟಿಲಿನ ಶಿಶು ಮಾಯವಾಯಿತು ಹರಿಯೆ ॥ ೩ ॥ ತಂದೆ ಶ್ರೀಪುರಂದರವಿಠಲ ನಾರಾಯಣ । ನಾ ಸಾಹೊತ್ತಿಗೆ ನೀ ಕಾಯೋ ಹರಿಯೆ ॥ ೪ ॥ ಶ್ರೀಃ ॥

## ೭೦. ರಾಗ ಸೌರಾಷ್ಟ್ರ, ಅಟತಾಳ.

ಮಲಗಿ ಯೆದ್ದನು ಕಾಣೆ ಮಕ್ಕಳ ಮಾಣಿಕ ರಂಗ । ಎದ್ದ ಕಾಣೆ ॥ ಅಮ್ಮ । ಛಲಹೋರಿ ಅಳುತಾನೆ ಮೊಲೆ ಕೊಡೆ ರಂಗಗೆ । ಎದ್ದ ಕಾಣೆ ॥ ॥ ಪಲ್ಲ ॥ ಧರೆಯೊಳು ತಮನ ಮರ್ದಿಸಲೆಂದು ಮತ್ಸ್ಯನ । ಗೆದ್ದ ಕಾಣೆ । ಭರದಿ ಮಂದರ ಪೊತ್ತು ಇಳೆಯೊಳು ಕೂರ್ಮನಾ । ಗೆದ್ದ ಕಾಣೆ ॥ ಧರೆಯ ಕದ್ದಸುರನ್ನ ಕೊಲಲೆಂದು ವರಹನಾ । ಗೆದ್ದ ಕಾಣೆ । ತರಳ ಕರೆಯೆ ಕಂಬದಿಂದ ನರಸಿಂಹನಾ । ಗೆದ್ದ ಕಾಣೆ ॥ ೧ ॥ ಚಿಕ್ಕ ವೇಷದಲಿ ದಾನವ ಬೇಡಿ ವಾಮನ । ಗೆದ್ದ ಕಾಣೆ । ಉಕ್ಕಿನ ಕೊಡಲಿಯ ಪಿಡಿದು ಪರಶುರಾಮ । ಎದ್ದ ಕಾಣೆ ॥ ರಕ್ಕಸ ರಾವಣನ ಕೊಲಲೆಂದು ಶ್ರೀರಾಮ । ಎದ್ದ ಕಾಣೆ । ಸೊಕ್ಕಿದ ಕಂಸನ್ನ ವಧೆಮಾಡೆ ಶ್ರೀಕೃಷ್ಣ । ಎದ್ದ ಕಾಣೆ ॥ ॥ ೨ ॥ ಪುರದ ಸತಿಯರ ವ್ರತವನಳಿದು ಬುದ್ಧ । ಎದ್ದ ಕಾಣೆ । ಹರುಷದಿ

ತುರಗವನೇರಿದ ಕಲ್ಕ್ಯ ತಾ । ನೆದ್ದ ಕಾಣೆ ॥ ಶರಣಾಗತರನ್ನು ಪಾಲಿಪ ಶ್ರೀಹರಿ । ಎದ್ದ ಕಾಣೆ । ನಮ್ಮ । ವರದ ಪುರಂದರವಿಠಲ ಕೋಟಿಸೂರ್ಯ । ಎದ್ದ ಕಾಣೆ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೭೧. ರಾಗ ಶಂಕರಾಭರಣ, ಏಕತಾಳ.

ಹೇಳಿದರೆ ನಮ್ಮ ಮೇಲೆ ಯಾಕಮ್ಮ ಸಿಟ್ಟು । ಇಂಥ । ಗಾಳಿಗಾರ ಮಗನ ಪಡದ ಮೇಲೆ ನೀವಿಷ್ಟು ॥ ಪಲ್ಲ ॥ ಸಣ್ಣ ರುಮಾಲು ಕಟ್ಟಿ ಚುಂಗಾಬಿಟ್ಟು । ಫಣೆಗೆ । ಬಣ್ಣಿಸಿ ಕಸ್ತೂರಿ ತಿಲಕವನಿಟ್ಟು ॥ ಚಿಣ್ಣಿಕೋಲು ಚೆಂಡು ಬೊಗರಿ ಕೈಯಲಿಟ್ಟು । ಪೊಸ । ಬೆಣ್ಣೆಯ ಮೆಲ್ಲು ಹೋಗೆಂದು ಕಳುಹಿಬಿಟ್ಟು ॥ ೧ ॥ ಕರದು ಕೈಯಲ್ಲಿ ಚಿಟ್ಟಿಬೆಲ್ಲ ಕೊಟ್ಟು । ಚಿಕ್ಕ । ಹರಳು ಕಲ್ಲುಗಳನ್ನೆ ಆರಿಸಿಕೊಟ್ಟು ॥ ವಾರಿಗೆಯ ಪುಂಡರನ್ನು ಮಾಡಿಕೊಟ್ಟು । ಗೋಪಿ । ಊರನೆಲ್ಲ ಸುಳಿಯೆಂದು ಕಳುಹಿಕೊಟ್ಟು ॥ ೨ ॥ ಹೋಗೆಂದು ರಂಗನ ಕಳುಹಿಕೊಟ್ಟು । ಗೋಪಿ । ಆಗಭೋಗಂಗಳೆಲ್ಲ ತುಂಬಿಕೊಟ್ಟು ॥ ನಿಗಮಚೋರನೆಂದೆಂಬ ಪೆಸರನಿಟ್ಟು । ಗೋಪಿ । ಪುರಂದರವಿಠಲನ್ನ ಬೆಳಸಿಬಿಟ್ಟು ॥ ೩ ॥ ಶ್ರೀಃ ॥

## ೭೨. ರಾಗ ನಾಟಿ, ಝಂಪೆತಾಳ.

ಎಲೆ ಎಲೆ ಮನವೆ ನೀ ತಿಳಿ ॥ ಪಲ್ಲ ॥ ಎಲೆ ಜಿಹ್ವೆ ನೀನು ಕೇಶವನ ನಾಮವ ನುತಿಸು । ಎಲೆ ಮನವಸುರವೈರಿಯಂಘ್ರಿಗಳ ಭಜಿಸು ॥ ಎಲೆ ಕರಂಗಳಿರಾ ಶ್ರೀಧರನ ಸೇವೆಯ ಮಾಡಿ । ಎಲೆ ಕರ್ಣಗಳಿರಾ ಅಚ್ಯುತನ ಕಥೆ ಕೇಳಿ ॥ ೧ ॥ ಎಲೆ ನೇತ್ರಗಳಿರಾ ಕೃಷ್ಣನ ಮೂರ್ತಿಯನೆ ನೋಡಿ । ಎಲೆ ಕಾಲುಗಳಿರಾ ಹರಿಯಾತ್ರೆಯನೆ ಮಾಡಿ ॥ ಎಲೆಲೆ ನಾಸಿಕವೆ ಮುಕುಂದನ ಶ್ರೀಚರಣದ । ತುಳಸಿ ಪರಿಮಳವಾಘ್ರಾಣಿಸನುದಿನವು ॥ ॥ ೨ ॥ ಎಲೆ ಶಿರವೆ ನೀನಧೋಕ್ಷಜನ ವರ ಶಿರಿಚರಣ । ಜಲರುಹದೊಳಳಿಯಂತೆ ಬಿಡದಲೋಲ್ಯಾಡು ॥ ಎಲೆ ತನುವೆ ನೀನು ಪುರಂದರವಿಠಲನ್ನ । ಭಕತಜನರುಗಳ ಸಂಗತಿಯಿಂದ ಬಾಳು ॥ ೩ ॥ ಶ್ರೀಃ ॥

೭೩. ರಾಗ ನಾದನಾಮಕ್ರಿಯೆ, ತಾಳ.

ಊಟಕ್ಕೆ ಬಂದೆವು ನಾವು । ನಿಮ್ಮ । ಆಟಪಾಟವ ಬಿಟ್ಟು ಅಡುಗೆ ಮಾಡಮ್ಮ ॥ ಪಲ್ಲ ॥ ಕತ್ತಲಿಟ್ಟಾವಮ್ಮ ಕಣ್ಣು । ಬಾಯಿ । ಬತ್ತಿಬರುತ ಲಿದೆ ಕೈಕಾಲು ಝುಮ್ಮು ॥ ಹೊತ್ತು ಹೋಗಿಸಬೇಡವಮ್ಮ । ಒಂದು । ತುತ್ತಾದರು ಇತ್ತು ಸಲಹು ನಮ್ಮಮ್ಮ ॥ ೧ ॥ ಒಡಲೊಳಗೇ ಉಸಿರಿಲ್ಲ । ಒಂದು । ಕ್ಷಣವಾದರೆ ಜೀವ ನಿಲ್ಲುವದಿಲ್ಲ ॥ ಮಡಿದರೆ ದೋಷ ತಟ್ಟು ವುದು । ಒಂದು । ಹಿಡಿ ಅಕ್ಕಿಯಿಂದಲೆ ಕೀರ್ತಿಬಾಹೋದು ॥ ೨ ॥ ಹೊನ್ನು ರಾಸಿಯ ತಂದು ಸುರಿಯೆ । ಕೋಟಿ । ಕನ್ನಿಕೆಯರ ತಂದು ಧಾರೆಯನೆರೆಯೆ ॥ ಅನ್ನದಾನಕ್ಕಿನ್ನು ಸರಿಯೆ । ಪ್ರ । ಸನ್ನ ಪುರಂದರ ವಿಟ್ಠಲ ಧೊರೆಯೆ ॥ ೩ ॥ ಶ್ರೀಃ ॥

೭೪. ರಾಗ ಮಧ್ಯಮಾವತಿ, ಆದಿತಾಳ.

ಎಲ್ಲಾನು ಬಲ್ಲೆನೆಂಬುವಿರಲ್ಲ । ಅವಗುಣ ಬಿಡಲಿಲ್ಲ ॥ ಪಲ್ಲ ॥ ಸೊಲ್ಲಿಗೆ ಶರಣರ ಕಥೆಗಳ ಪೇಳುತ । ಅಲ್ಲದ ನುಡಿಯನು ನುಡಿಯುವಿರಲ್ಲ ॥ ॥ ಅನುಪಲ್ಲ ॥ ಕಾವಿಯನುಟ್ಟು ತಿರುಗುವಿರಲ್ಲ ಕಾಮವ ಬಿಡಲಿಲ್ಲ । ನೇಮ ನಿಷ್ಠೆಗಳ ಮಾಡುವಿರಲ್ಲ ತಾಮಸ ಬಿಡಲಿಲ್ಲ ॥ ತಾವೊಂದರಿಯದೆ ಪರರನು ತಿಳಿಯದೆ । ಶ್ವಾನನ ಕುಳಿಯಲಿ ಬೀಳುವಿರಲ್ಲ ॥ ೧ ॥ ಗುರುಗಳ ಸೇವೆ ಮಾಡಿದಿರಲ್ಲ ಗುರುತಾಗಲಿಲ್ಲ । ಪರಿಪರಿ ದೇಶವ ತಿರುಗಿದಿರಲ್ಲ ಪೊರೆಯುವರಿನ್ನಿಲ್ಲ ॥ ಅರಿವೊಂದರಿಯದೆ ಆಗಮ ತಿಳಿಯದೆ । ನರಕ ಕೂಪದಲಿ ಬೀಳುವಿರಲ್ಲ ॥ ೨ ॥ ಬ್ರಹ್ಮಜ್ಞಾನಿಗಳು ಎನಿಸುವಿರಲ್ಲ ಹಮ್ಮು ಬಿಡಲಿಲ್ಲ । ಸುಮ್ಮನೆ ಯೋಗವ ಮಾಡುವಿರಲ್ಲ ಸುಳ್ಳನು ಬಿಡಲಿಲ್ಲ ॥ ಗಮ್ಮನೆ ಪುರಂದರವಿಠಲನ ಪಾದಕೆ । ಹೆಮ್ಮೆ ಬಿಟ್ಟು ನೀವೆರಗಲಿ ಇಲ್ಲ ॥ ೩ ॥ ಶ್ರೀಃ ॥

೭೫. ರಾಗ ಬೇಹಾಗ್, ಆದಿತಾಳ.

ಕಲಿಯುಗದೊಳು ಹರಿನಾಮವ ನೆನೆದರೆ । ಕುಲಕೋಟಿಗಳುದ್ಧರಿಸು ವುದು ॥ ಪಲ್ಲ ॥ ಸುಲಭದ ಮುಕ್ತಿಗೆ ಸುಲಭನೆಂದೆನಿಸುವ । ಜಲರುಹ

ನಾಭನ ನೆನೆ ಮನವೆ ॥ ಅನುಪಲ್ಲ ॥ ಸ್ನಾನವನರಿಯೆನು ಮೌನವನರಿಯೆನು । ಧ್ಯಾನವನರಿಯೆನೆಂದೆನಬೇಡ ॥ ಜಾನಕಿವಲ್ಲಭ ದಶರಥನಂದನ। ಗಾನವಿನೋದನ ನೆನೆ ಮನವೆ ॥ ೧ ॥ ಅರ್ಚಿಸಲರಿಯೆನು ಮೆಚ್ಚಿಸಲರಿಯೆನು । ತುಚ್ಛನು ನಾನೆಂದೆನಬೇಡ ॥ ಅಚ್ಯುತಾನಂತ ಗೋವಿಂದ ಮುಕುಂದನ । ಇಚ್ಛೆಯಿಂದ ನೀ ನೆನೆ ಮನವೆ ॥ ೨ ॥ ಜಪವೊಂದರಿಯೆನು ತಪವೊಂದರಿಯೆನು । ಉಪದೇಶವಿಲ್ಲೆಂದೆನಬೇಡ ॥ ಅಪಾರ ಮಹಿಮ ಶ್ರೀಪುರಂದರವಿಠಲನ । ಉಪಾಯದಿಂದಲಿ ನೆನೆ ಮನವೆ ॥ ೩ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೭೬. ರಾಗ ವಸಂತ, ಆದಿತಾಳ.

ಕೊಡು ಬೇಗ ದಿವ್ಯಮತಿ । ಸರಸ್ವತಿ । ಕೊಡು ಬೇಗ ದಿವ್ಯ ಮತಿ ॥ ॥ ಪಲ್ಲ ॥ ವ್ಯಾಡಹರಿಹಯಮುಖರೊಡೆಯಳೆ ನಿನ್ನಯ । ಅಡಿಗಳಿಗೆರಗುವೆ ಅಮ್ಮ ಬ್ರಹ್ಮನರಾಣಿ ॥ ಅನುಪಲ್ಲ ॥ ಇಂದಿರಾರಮಣನ ಹಿರಿಯ ಸೊಸೆಯು ನೀನು । ಬಂದೆನ್ನ ವದನದಿ ನಿಂದು ನಾಮವ ನುಡಿಸೆ ॥ ೧ ॥ ಅಖಿಳ ವಿದ್ಯಾಭಿಮಾನಿ ಅಜನ ಪಟ್ಟದರಾಣಿ । ಸುಖವಿತ್ತು ಪಾಲಿಸೆ ಸುಜನ ಶಿರೋಮಣಿ ॥ ೨ ॥ ಪತಿತಪಾವನೆ ನೀ ಗತಿಯೆಂದು ನಂಬಿದೆ । ವಿತತ ಪುರಂದರವಿಠಲನ ತೋರೆ ॥ ೩ ॥ ಶ್ರೀಃ ॥

## ೭೭. ರಾಗ ಕಾಂಬೋಧಿ, ಅಟತಾಳ.

ಸಂಸಾರವೆಂಬಂಥ ಭಾಗ್ಯವಿರಲಿ ॥ ಪಲ್ಲ ॥ ಕಂಸಾರಿ ನೆನೆವೆಂಬ ಸೌಭಾಗ್ಯವಿರಲಿ ॥ ಅನುಪಲ್ಲ ॥ ತಂದೆ ನೀನೇ ಕೃಷ್ಣ ತಾಯಿ ಇಂದಿರೆದೇವಿ । ಪೊಂದಿದ ಅಣ್ಣನು ವನಜಸಂಭವನು ॥ ಇಂದುಮುಖಿ ಸರಸ್ವತೀದೇವಿಯೆ ಅತ್ತಿಗೆಯು । ಎಂದೆಂದಿಗೂ ವಾಯುದೇವರೆ ಗುರುವು ॥ ೧ ॥ ಭಾರತೀ ದೇವಿಯೇ ಗುರುಪತ್ನಿಯು ಎನಗೆ । ಗರುಡ ಶೇಷಾದಿಗಳೆ ಗುರುಪುತ್ರರು ॥ ಹರಿದಾಸರೆಂಬುವರೆ ಇಷ್ಟಬಾಂಧವರೆನಗೆ । ಹರಿಭಜನೆ ನಡೆಯುತಿಹ ಸ್ಥಳವೆ ಮಂದಿರವು ॥ ೨ ॥ ಸರುವಾಭಿಮಾನವನು ತ್ಯಜಿಸುವುದೆ ಸುಸ್ನಾನ ।

ಹರಿಯ ನಾಮವೆ ಇನ್ನು ಅಮೃತಪಾನ ॥ ವರದ ಪುರಂದರವಿಠಲ ನಿನ್ನ ಪಾದಧ್ಯಾನ । ಕರುಣಿಸಿ ಅನವರತ ಕರಪಿಡಿದು ಕಾಯೊ ॥ ೩ ॥ ಶ್ರೀಃ ॥

## ೭೮. ರಾಗ ಕಾಂಬೋಧಿ, ಅಟತಾಳ.

ಇಬ್ಬರ್ಹೆಂಡಿರ ಸುಖವನಿಂದು ಕಂಡೆ । ಅಬ್ಬಬ್ಬ ಎಂದಿಗೂ ಸಾಕು ಸಾಕಯ್ಯ ॥ ಪಲ್ಲ ॥ ಒಬ್ಬಳಲಿ ಪೋಗಿ ಓಗರವ ಮಾಡೆನ್ನಲು । ಬೊಬ್ಬೆ ಯೇನಿದು ಕೊಬ್ಬೆ ನಡೆಯೆಂದಳು ॥ ತಬ್ಬಿಬ್ಬುಗೊಂಡು ಇನ್ನೊಬ್ಬಳನು ಮಾಡೆನಲು । ಅಬ್ಬ ಬಿಸಿ ಮುಟ್ಟಲಾಪೆನೆ ಎಂದಳು ॥ ೧ ॥ ಹಿರಿಯವಳ ಕೂಡೆ ನಾ ಸರಸವಾಡುವೆನೆಂದು । ಇರುಳುಪ್ಪರಿಗೆಯನು ಏರುತಿರಲು ॥ ಚರಣವೊಬ್ಬಳು ಪಿಡಿದು ಶಿರವನೊಬ್ಬಳು ಪಿಡಿದು । ಸರಸರನೆಂದೆನ್ನ ಎಳೆಯುತಿಹರಯ್ಯೋ ॥ ೨ ॥ ಅವಳ ಮಗ್ಗಲೊಳಿರಲು ಇವಳ ಮಗ್ಗಲ ಕಾಟ । ಇವಳ ಮಗ್ಗಲೊಳಿರಲು ಅವಳ ಕಾಟ ॥ ಅವಳಿಂದ ಸುಖವಿಲ್ಲ ಇವಳಿಂದ ಫಲವಿಲ್ಲ । ಇವರಿಬ್ಬರ ಸಂಗ ಅಭಿಮಾನಭಂಗ ॥ ೩ ॥ ಎರೆದು ಕೊಂಬುವೆನೆಂದು ಎಣ್ಣೆಯನು ಬಿಸಿಮಾಡಿ । ಹಿರಿಯವಳ ಕೈಯಿಂದ ವರಿಸಿಕೊಳಲು ॥ ಕಿರಿಯವಳು ತಾ ಬಂದು ದುರುಳತನದಿಂದಲಿ । ಎರಗಿ ಪಾತ್ರೆಯನೊಡೆದು ಹೈರಾಣ ಮಾಡಿದಳು ॥ ೪ ॥ ಅಂಗವರ್ಧವಾಗಿ ಎರಡು ಭಾಗವನು ನಾ । ಹಿಂಗದೆ ಈರ್ವರಿಗೆ ಸಮಮಾಡಿ ಕೊಡಲು ॥ ಮಂಗಳಾಂಗನೆ ಸಿರಿಪುರಂದರವಿಟ್ಠಲನೆ । ಅಂಗವನು ಮುರಿದು ಮೂಲಿಯಲಿ ಕುಳ್ಳಿರಿಸಿದರು ॥ ೫ ॥ ಶ್ರೀಃ ॥

## ೭೯. ರಾಗ ಸೌರಾಷ್ಟ್ರ, ಅಟತಾಳ.

ಏಳೇಳು ಶರಧಿಯು ಏಕವಾಗಿದೆ ಕಂಡ್ಯ । ಹ್ಯಾಗೆ ಬಂದೆ ಹೇಳೊ ಕೋತಿ ॥ ಪಲ್ಲ ॥ ಏಳು ಶರಧಿಯು ಎನಗೆ ಏಳು ಕಾಲುವೆಯು । ತೂಳಿ ಲಂಘಿಸಿ ಬಂದೆ ಭೂತ ॥ ಅನುಪಲ್ಲ ॥ ಏಳು ಸಮುದ್ರದೊಳಿರುವ ಮಕರಿ ಮತ್ಸ್ಯ । ಹ್ಯಾಗೆ ಬಿಟ್ಟರು ಹೇಳೋ ಕೋತಿ ॥ ಏಳು ಸಮುದ್ರದ ಮಕರಿ ಮತ್ಸ್ಯದ ಕೂಡೆ । ಮಾತಾಡಿ ಬಂದೆನೊ ಭೂತ ॥ ೧ ॥ ಲಂಕಾ ದ್ವಾರ

ದೊಳೊಬ್ಬ ಲಂಕಿಣಿ ಇರುವಳು । ಹ್ಯಾಗೆ ಬಿಟ್ಟಳು ಹೇಳೊ ಕೋತಿ ॥ ಲಂಕಿಣಿಯನು ಕೊಂದು ಶಂಕೆಯಿಲ್ಲದೆ ನಾನು । ಬಿಂಕದಿಂದಲಿ ಬಂದೆ ಭೂತ ॥ ೨ ॥ ಕೊಂಬೆ ಕೊಂಬೆಗೆ ಕೋಟಿಮಂದಿ ರಾಕ್ಷಸರಿರೆ । ಹ್ಯಾಗೆ ಬಿಟ್ಟರು ಪೇಳೊ ಕೋತಿ ॥ ಕೊಂಬೆ ಕೊಂಬೆಗೆ ಕೋಟಿಮಂದಿ ರಾಕ್ಷಸ ರನ್ನು । ಕೊಂದ್ಹಾಕಿ ಬಂದೆನೊ ಭೂತ ॥ ೩ ॥ ಯಾವೂರೊ ಎಲೊ ನೀನು ಯಾವ ಭೂಮಿಯೊ ನಿಂದು । ಯಾಕೆ ಬಂದೆ ಹೇಳೊ ಕೋತಿ ॥ ಯಾವ ವನದೊಳಗೆ ಜಾನಕಿದೇವಿ ಇದ್ದಾಳೊ । ಅವಳ ನೋಡ ಬಂದೆ ಭೂತ ॥ ೪ ॥ ದಕ್ಷಿಣಪುರಿ ಲಂಕಾ ದಾನವರಿಗಲ್ಲದೆ । ತ್ರ್ಯಕ್ಷಾದ್ಯರಿಗಳ ವಲ್ಲ ಕೋತಿ ॥ ಪಕ್ಷಿಧ್ವಜ ರಾಮನ ಅಪ್ಪಣೆ ಎನಗಿಲ್ಲ । ಈಕ್ಷಣ ತಪ್ಪಿಸಿ ಕೊಂಡೆ ಭೂತ ॥ ೫ ॥ ದೂತನಾಗಿಹೆ ಎನ್ನ ಕೈಯೊಳು ಸಿಕ್ಕಿಹೆ । ಕೋಪ ವಿನ್ಯಾತಕ್ಕೊ ಕೋತಿ ॥ ನಾ ತಾಳಿಕೊಂಡಿಹೆನೋ ಈ ಕ್ಷಣದಿ ಲಂಕೆ । ನಿರ್ಧೂಮವನು ಮಾಳ್ಪೆ ಭೂತ ॥ ೬ ॥ ನಿಮ್ಮಂಥಾ ದಾಸರು ನಿಮ್ಮರಸನ ಬಳಿ । ಎಷ್ಟು ಮಂದಿದ್ದಾರೊ ಕೋತಿ ॥ ನನ್ನಂಥಾ ದಾಸರು ನಿನ್ನಂಥಾ ಹೇಡಿಗಳು । ಕೋಟ್ಯಾನು ಕೋಟಿಯೊ ಭೂತ ॥ ೭ ॥ ಎಲ್ಲಿಂದ ನೀ ಬಂದೆ ಏತಕ್ಕೆಲ್ಲರ ಕೊಂದೆ । ಯಾವರಸಿನ ಬಂಟ ಕೋತಿ ॥ ಚಲ್ವಯೋಧ್ಯಾಪುರದರಸು ಜಾನಕೀಪತಿ । ರಾಮಚಂದ್ರನ ಬಂಟ ಭೂತ ॥ ೮ ॥ ಸಿರಿರಾಮಚಂದ್ರನು ನಿನ್ನರಸನಾದರೆ । ಆತ ಮುನ್ನಾರ್ಹೇಳೊ ಕೋತಿ ॥ ಹಿರಣ್ಯಕನನು ಸೀಳಿ ಪ್ರಹ್ಲಾದಗೊಲಿದ ಶ್ರೀ । ಪುರಂದರವಿಠಲನೊ ಭೂತ ॥ ೯ ॥ ಶ್ರೀಃ ॥

## ೮೦. ರಾಗ ಬಿಲಹರಿ, ಅಟತಾಳ.

ಏನಾಯಿತೊ ಈ ಜನಕೆ । ಮೌನವನು ಹಿಡಿದು ಮರೆತರು ಹರಿಯ ॥ ॥ ಪಲ್ಲ ॥ ನಾಲಿಗ್ಗೆ ಮುರಿದಿತೊ ನೆಗ್ಗಿಲ ಕೊನೆಮುಳ್ಳು । ಬಾಲಕತನದಲಿ ಭೂತ ಹಿಡಿಯಿತೋ ॥ ಮೇಲೆ ಕೆಳಗಿನ ತುಟಿ ಎರಡು ಒಂದಾಯಿತೊ । ಕಾಲಮೃತ್ಯುವು ಬಂದು ಕಂಗೆಡಿಸಿತೊ ॥ ೧ ॥ ಘಟಸರ್ಪ ಕಚ್ಚಿ ವಿಷ ಘನವಾಗಿ ಏರಿತೊ । ಕಟಕಂಸಿ ನಾಲಿಗೆ ಕಡಿದ್ಹೋಯಿತೋ ॥ ಹಟದಲ್ಲಿ ಹರಿಯನ್ನು ನೆನೆಯದೆ ಇರುವಂಥ । ಕುಟಿಲ ಚಂಚಲ ಮನಸು ಕೂಡಿ

ಬಾಧಿಸಿತೊ ॥ ೨ ॥ ಹರಿಯೆಂದರಿವರ ಶಿರ ಹರಿದು ಬೀಳುವುದೇ । ಹರಿ ನಾಮ ಹಣೆಯಲ್ಲಿ ಬರೆದಿಲ್ಲವೆ ॥ ವರದ ಪುರಂದರವಿಟ್ಠಲರಾಯನ್ನ । ಸ್ಮರಿಸಿದರೆ ಸಿಡಿಲೆರಗಿ ಕೊಲ್ಲುವುದೇ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೬೧. ರಾಗ ಕಾಂಬೋಧಿ, ಅಟತಾಳ.

ಏನು ವ್ರತವೇನು ಸಾಧನಗಳೇನೊ ॥ ಪಲ್ಲ ॥ ಸ್ವಾನುಭವದಜ್ಞಾನ ಹೀನ ಮಾನವನೆ ॥ ಅನುಪಲ್ಲ ॥ ಶಾಕವ್ರತವೆನುತ ಫಲ ಶಾಕಗಳ ಬಿಡುವಂತೆ । ಬೇಕಾದ ಆಕಾಂಕ್ಷೆ ಬಿಡಬಾರದೆ ॥ ಸಾಕೆನಿಸದೆ ರತಿಗೆ ಸತತ ಮನ ಕೊಡುವಂತೆ । ಶ್ರೀಕಾಂತನೊಳು ಮನವನಿಡಬಾರದೆ ॥ ೧ ॥ ನೇಮಗಳ ಮಾಡಿ ಪರಪಾಕವನು ಬಿಡುವಂತೆ । ಕಾಮ ಕ್ರೋಧಂಗಳನು ಬಿಡಬಾರದೆ ॥ ತಾಮಸರ ಕಣ್ಣಿಂದ ನೋಡೆನೆಂಬುವ ನಿಷ್ಠೆ । ನೇಮವನು ಪರಸತಿಯೊಳಿಡಬಾರದೆ ॥ ೨ ॥ ಹೇಸಿ ದುರ್ಗಂಧಗಳಿಗೋಸರಿಸುವಂದದಲಿ । ಆಶಪಾಶಾದಿಗಳ ಬಿಡಬಾರದೆ ॥ ಈಶ ಶ್ರೀಪುರಂದರವಿಟ್ಠಲನ ಸೇವೆಯೋ । ಲೇಸೆನುತ ಸಂತೋಷಿಸಲು ಬಾರದೆ ॥ ೩ ॥ ಶ್ರೀಃ ॥

## ೬೨. ರಾಗ ಭೈರವಿ, ಅಟತಾಳ.

ಕೇಳಿ ಕೋಪಿಸಬೇಡ ಪೇಳಲಂಜುವೆ ನಾನು । ಬಾಳು ಹೀನವಲ್ಲವೆ ॥ ॥ ಪಲ್ಲ ॥ ಪೇಳಲೊಶವಲ್ಲ ಇಳೆಯೊಳಗೆ ಈ ಭವಣೆ । ಶ್ರೀಲೋಲ ಮಹಮಹಿಮನೇ ಸ್ವಾಮಿ ॥ ಅನುಪಲ್ಲ ॥ ಶಿರವೊಡಕ ಹಿರಿಯಮಗ ಧರೆಯೊಳ್ ಪೂಜಿತನಲ್ಲ । ಕಿರಿಯವನು ಭಂಡುಕೋರ ॥ ಸಿರಿಯು ತಾ ಸೇರುವಳು ಕಡುಲೋಭಿ ಮನೆಯಲ್ಲಿ । ಸೇರುವಳು ಸೊಸೆಯು ತಾ ಹೊಲೆಕುಲಗಳಲ್ಲಿ ॥ ೧ ॥ ಮಗಳ ಮಾರ್ಗವೆ ಡೊಂಕು ಮೈದುನನು ಗುರುದ್ರೋಹಿ । ಮೊಮ್ಮಗನು ಚಾಡಿಕೋರ ॥ ಹಗರಣಕೆ ನೀ ಜಾರ ಹೆಣ್ಣು ಕದ್ದೂ ಮೂರು । ಜಗದೊಡೆಯನೆಂದೆನಿಸಿದೆ ॥ ೨ ॥ ಲಕ್ಷ್ಮೀಪತಿಯೆಂದೆನಿಸಿ ಭಿಕ್ಷೆ ಬೇಡಿಕೊಂಡೆ । ಪಕ್ಷಿಯ ಹೆಗಲೇರಿ ರಾಜನೆನಿಸಿ ॥ ಸಾಕ್ಷಾತ್ ಶ್ರೀಪುರಂದರವಿಟ್ಠಲ ಇದ ತಿಳಿದು । ತಕ್ಷಣದಿ ಕ್ಷೀರಸಾಗರದಿ ಪವಡಿಸಿದೆ ॥ ೩ ॥

## ೮೩. ರಾಗ ಕಲ್ಯಾಣಿ, ಅಟತಾಳ. ✓

ಕೇಳನೋ ಹರಿ ತಾಳನೊ ॥ ಪಲ್ಲ ॥ ತಾಳಮೇಳಗಳಿದ್ದು ಪ್ರೇಮವಿಲ್ಲದ ಗಾನ ॥ ಅನುಪಲ್ಲ ॥ ತಂಬೂರಿ ಮೊದಲಾದ ಅಖಿಳ ವಾದ್ಯಗಳಿದ್ದು । ಕೊಂಬು ಕೊಳಲು ಧ್ವನಿ ಸ್ವರಗಳಿದ್ದು ॥ ತುಂಬುರು ನಾರದರ ಗಾನ ಕೇಳುವ ಹರಿ । ನಂಬಲಾರ ಈ ಡಂಭಕದ ಕೂಗಾಟ ॥ ೧ ॥ ನಾನಾ ಬಗೆಯ ರಾಗ ಭಾವ ತಿಳಿದು ಸ್ವರ । ಜ್ಞಾನ ಮನೋಧರ್ಮ ಜಾತಿ ಯಿದ್ದು ॥ ದಾನವಾರಿಯ ದಿವ್ಯನಾಮ ರಹಿತವಾದ । ಹೀನ ಸಂಗೀತ ಸಾಹಿತ್ಯಕ್ಕೆ ಮನವಿತ್ತು ॥ ೨ ॥ ಅಡಿಗಡಿಗಾನಂದಬಾಷ್ಪ ಪುಳಕದಿಂದ । ನುಡಿನುಡಿಗೆ ಶ್ರೀಹರಿಯೆನ್ನುತ ॥ ದೃಢಭಕ್ತರನು ಕೂಡಿ ಹರಿಕೀರ್ತನೆ ಪಾಡಿ । ಕಡೆಗೆ ಪುರಂದರವಿಠಲನೆಂದರೆ ಕೇಳ್ವ ॥ ೩ ॥ ಶ್ರೀಃ ॥

## ೮೪. ರಾಗ ಕಲ್ಯಾಣಿ, ಆದಿತಾಳ.

ಸತ್ಯವೆಂಬುದೆ ಸ್ನಾನ ಉಪವಾಸ ಜಪನೇಮ । ಅ । ಸತ್ಯದಲಿ ಮಾಡುವ ಕರ್ಮ ವ್ಯರ್ಥ ॥ ಪಲ್ಲ ॥ ಅಪ್ಪಳಿಸಿ ಪರರ ಒಡವೆಗಳ ತಂದುಂಡು ತಾ । ಒಪ್ಪದಿಂದುಪವಾಸ ವ್ರತವ ಮಾಡಿ ॥ ತಪ್ಪದಲೆ ಸ್ವರ್ಗವನು ಸೂರೆ ಗೊಂಬುವೆನೆಂಬೆ । ಸರ್ಪಗಳು ಮಾಡಿದ ಅಪರಾಧವೇನಯ್ಯ ॥ ೧ ॥ ಬಿಡದೆ ಮದ ಮತ್ಸರಾಹಂಕಾರದಲಿ ಮುಳುಗಿ । ಒಡನೆ ಬೆರಳುಗಳೆಣಿಸಿ ಮೌನದಿಂದ ॥ ತಡೆಯದಲೆ ಪರಲೋಕ ಸೂರೆಗೊಂಬುವೆನೆಂಬೆ । ಬಡ ಬಕನು ಮಾಡಿದ ಅಪರಾಧವೇನಯ್ಯ ॥ ೨ ॥ ಪರಸತಿಯು ಪರಧನವು ಪರನಿಂದೆ ಪರಹಿಂಸೆ । ಪರಮ ಪಾತಕದ ಕಾರಣವೆಂದು ತಿಳಿದು ॥ ಧರೆ ಗಧಿಕ ಪುರಂದರವಿಟ್ಠಲನ ಚರಣವನು । ನೆರೆ ಭಜಿಸಿ ಸುಖಿಯಾಗಿ ಬಾಳಲವೊ ಮನುಜ ॥ ೩ ॥ ಶ್ರೀಃ ॥

## ೮೫. ರಾಗ ಮೋಹನ, ಅಟತಾಳ.

ಮಾಮಝು ಭಾಪುರೇ ಭಳಿರೆ ಹನುಮಂತ ॥ ಪಲ್ಲ ॥ ರಾಮಪದ ಸೇವಿಪ ವೀರ ಹನುಮಂತ ॥ ಅನುಪಲ್ಲ ॥ ಹುಟ್ಟುತಲೆ ಹೊನ್ನ ಕಚ್ಚುಟವ

ಕುಂಡಲವೆರಸಿ । ನಿಷ್ಠೆಯಲಿ ರಘುಪತಿಯ ಪಾದವನೆ ಕಂಡು । ದಿಟ್ಟ ಹರಿದಾಡಿ ಮನಮುಟ್ಟಿ ಪೂಜಿಸಲಜನ । ಪಟ್ಟಕನುವಾದ ಸಿರಿವಂತ ಹನುಮಂತ ॥ ೧ ॥ ಅಂಬರಕೆ ಪುಟನೆಗೆದು ಅಂಬುಧಿಯ ನೆರೆದಾಟಿ ಕುಂಭಿನಿಯ ಮಗಳಿಗುಂಗುರವನಿತ್ತೆ ॥ ಬೆಂಬಿಡದೆ ಲಂಕೆಯನು ಸಂಭ್ರಮದಿ ಸಖಗಿತ್ತೆ । ಗಂಭೀರ ವೀರಾದಿವೀರ ಹನುಮಂತ ॥ ೨ ॥ ಅತಿ ದುರುಳ ರಕ್ಕಸನು ರಥದಮೇಲಿರಲು ರಘು । ಪತಿಯು ಪದಚರಿಯಾಗಿ ನಿಂತಿರಲು ನೋಡಿ ॥ ಪೃಥಿವಿ ಗಗನಕೆ ಬೆಳದು ರಥವಾದೆ ಒಡೆಯನಿಗೆ । ಅತಿಭಯಂಕರ ಸತ್ವವಂತ ಹನುಮಂತ ॥ ೩ ॥ ಒಡೆಯ ಉಣಕರೆಯ ಲಂದಡಿಗಡಿಗೆ ಕೈಮುಗಿದು । ದೃಢಭಕುತಿಯಿಂದ ಮೌನದಲಿ ಕುಳಿತು ॥ ಎಡೆಯ ಕೊಂಡೆದ್ದೋಡಿ ಗಗನದಲಿ ಸುರರಿಗೆ । ಕೊಡುತ ಸವಿದುಂಡ ಗುಣವಂತ ಹನುಮಂತ ॥ ೪ ॥ ಪ್ರಥಮದಲಿ ಹನುಮಂತ ದ್ವಿತಿಯದಲಿ ಕಲಿಭೀಮ । ತೃತಿಯದಲಿ ಗುರುಮಧ್ವಮುನಿಯು ಎನಿಸಿ ॥ ಪ್ರತಿಯಿಲ್ಲದಲೆ ಮೆರೆದೆ ಪುರಂದರವಿಟ್ಠಲನ । ಭಕ್ತ ನಿನಗಾರು ಸರಿ ವಿಜಯ ಹನುಮಂತ ॥ ೫ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

ಲ೬. ರಾಗ ಕಾಂಬೋಧಿ, ಅಟತಾಳ.

ವರುಷ ಕಾರಣವಲ್ಲ ಹರಿಭಜನೆಗೆ ॥ ಪಲ್ಲ ॥ ಅರಿತು ತತ್ವಜ್ಞರು ಕೇಳಿ ಸನ್ಮುದದಿ ॥ ಅನುಪಲ್ಲ ॥ ತರಳತನದಲಿ ಕಂಡ ಹರಿಯ ಧ್ರುವರಾಯನು । ಹಿರಿಯ ತಾನವನಪ್ಪ ಕಂಡನೇನೋ ॥ ತರಳ ಪ್ರಹ್ಲಾದನು ನರಹರಿಯ ತಾ ಕಂಡ । ಹಿರಿಯನವನಪ್ಪ ತಾ ಮರೆಯಲಿಲ್ಲೇನೋ ॥ ೧ ॥ ಹಿರಿದಾಗಿ ಬಹುಕಾಲ ಮರದ ಮೇಲ್ಬಾಳುವ । ಇರುಳುಗಣ್ಣಿನ ಗೂಬೆ ತಾ ದೊಡ್ಡದೇ ॥ ಮರಿಯಾದ ಅರಗಿಣಿಯು ಹರಿಕೃಷ್ಣ ಎಂದೊದರೆ । ಮರಿ ದೊಡ್ಡದೆಂತೆಂದು ಪೇಳುವರು ಜನರು ॥ ೨ ॥ ಸರುವದಾ ಒದರುವರು ಅರಣ್ಯವಾಸಿಗಳು । ಮರದಡಿಗೆ ಬಿದ್ದ ಎಲೆಗಳ ತಿನ್ನುತ ॥ ಪರಮಪಾತಕಿ ಅಜಾಮಿಳನು ನಾರಗ ಎನಲು । ಭರದಿಂದ ಸಲಹಿದನು ಪುರಂದರ ವಿಠಲ ॥ ೩ ॥ ಶ್ರೀಃ ॥

## ೮೭. ರಾಗ ಮುಖಾರಿ, ಅಟತಾಳ.

ಎಂದಿಗಲ್ಲದೆ ಮನದ ಪರಿತಾಪವಡಗದೊ ಮು । ಕುಂದ ಮಾಧವ ಮುರಾರೇ ಶೌರೇ ॥ ಪಲ್ಲ ॥ ಎಂದಿಗೆ ನಿನ್ನ ಭಕ್ತರ ಸಂಗ ಸೌಖ್ಯಗಳೊ । ಎಂದಿಗಭಯವ ಪಡೆವೆನೋ ಕೃಷ್ಣ ॥ ಅನುಪಲ್ಲ ॥ ಎಂದಿಗೀ ಜನನ ಮರಣಾದಿಗಳು ಪರಿಹರವು । ಎಂದಿಗೆ ಏಕಾಂತ ಭಕ್ತಿಯೊ ಕೃಷ್ಣ । ಎಂದಿಗೀ ಮಾನಾವಮಾನ ಸುಖ ದುಃಖ । ನಿಂದೆ ವಂದನೆಗಳಲಿ ಸಮತೆಯೋ ಕೃಷ್ಣ ॥ ಎಂದಿಗೇ ಈ ಹೀನಜನ ಸಂಗ ಪರಿಹರವೊ । ಎಂದಿಗೆ ಸುಜ್ಞಾನ ಪಡೆವೆನೊ ಕೃಷ್ಣ । ಎಂದಿಗೆನ್ನದು ತನ್ನದೆಂಬ ದುರ್ವ್ಯಾಹ । ವೃಂದಗಳ ಕಡೆಗಣಿಪೆನೋ ಕೃಷ್ಣ ॥ ೧ ॥ ಎಂದಿಗೇ ಈ ಕರ್ಮಕಾನನವ ತರಿವುದೊ । ಎಂದಿಗಪರೋಕ್ಷಸುಖವೋ ಕೃಷ್ಣ । ಎಂದಿಗೇ ಶಮ ದಮಗಳನ್ನು ನಾ ಪಡೆವುದೊ । ಎಂದಿಗಾಸೆ ನಿರಾಸೆಯೋ ಕೃಷ್ಣ ॥ ಎಂದಿಗೀ ಕಾಮ ಸಂಕಲ್ಪಾದಿ ದೋಷಗಳ । ದ್ವಂದ್ವಗಳ ಕಡೆಗಣಿಪೆನೋ ಕೃಷ್ಣ । ಎಂದಿಗೀ ಕಾಯ ಕರಣಾದಿಗಳು ನಾನಲ್ಲ। ವೆಂದೆಂಬ ನಿಜದ ನೆಲೆಯೋ ಕೃಷ್ಣ ॥ ೨ ॥ ದುರಿತ ಕೋಟಿಗಳನಳವಡಿಸಿಪ್ಪ ಸಂಸಾರ । ಸೆರೆಮನೆಯ ಕಳೆವುದೆಂದೋ ಕೃಷ್ಣ । ಕರಣಗಳ ಕಾದಾಟವನು ಬಿಡಿಸುವಭ್ಯಾಸ । ವನು ನಾನು ಪಡೆವುದೆಂದೋ ಕೃಷ್ಣ ॥ ತೆರತೆರದ ತಾಪತ್ರಯಗಳನ್ನು ನೀಗಿಸಿ । ಸ್ಥಿರ ಚಿತ್ತ ಪಡೆವುದೆಂದೋ ಕೃಷ್ಣ । ಸಿರಿಪುರಂದರವಿಠಲರಾಯ ನಿನ್ನಯ ದಿವ್ಯ । ಚರಣದೊಲುಮೆಯು ಎಂದಿಗೋ ಕೃಷ್ಣ ॥ ೩ ॥ ಶ್ರೀಃ ॥

## ೮೮. ರಾಗ ಕಾಂಬೋಧಿ, ಝಂಪೆತಾಳ.

ಎಷ್ಟಾದರು ಮುನ್ನ ಕೊಟ್ಟಿಲ್ಲದಿಲ್ಲ ॥ ಪಲ್ಲ ॥ ಪಡ । ದಷ್ಟೆ ಅಲ್ಲದೆ ಬೇರೆ ಬಯಸಿದರಿಲ್ಲ ॥ ಅನುಪಲ್ಲ ॥ ಯಾರಾರ ಮನೆಗಳಿಗೆ ಹೋಗಿ ಬಂದರು ಇಲ್ಲ । ಊರನಾಳುವ ಧೊರೆಯ ಸೇರಿದರಿಲ್ಲ ॥ ನೀರೊಳಗೆ ತಾ ಮುಳುಗಿ ಜಪವ ಮಾಡಿದರಿಲ್ಲ । ಹೇರಳ ವಿದ್ಯೆಗಳ ಕಲಿತರಿಲ್ಲ ॥ ೧ ॥ ತನ್ನೊಡನೆ ಪುಟ್ಟಿಹರ ಭಾಗ್ಯವು ತನಗಿಲ್ಲ । ಹೆಣ್ಣಿನ ದೆಸೆಯಿಂದ ಬಾಹೊದಿಲ್ಲ ॥ ಅನ್ಯರನು ನೋಡಿ ತಾ ಕರಗಿ ಕೊರಗಿದರಿಲ್ಲ । ತನ್ನ ಮಕ್ಕಳು ಪಡೆದ

ಪುಣ್ಯ ತನಗಿಲ್ಲ ॥ ೨ ॥ ಬಿಟ್ಟಿ ದುಡಿದು ಬಾಯು ಬಿಟ್ಟು ಬೇಡಿದರಿಲ್ಲ । ಕಟ್ಟಾಳು ತಾನಾದರೇನು ಫಲವಿಲ್ಲ ॥ ಸೃಷ್ಟಿಯೊಳಗೆ ನಮ್ಮ ಪುರಂದರ ವಿಠಲನ । ಮುಟ್ಟಿ ಪೂಜಿಸಿದರುಣಲುಂಟು ಉಡಲುಂಟು ॥ ೩ ॥ ಶ್ರೀಃ ॥

## ೮೯. ರಾಗ ಮಧ್ಯಮಾವತಿ, ಅಟತಾಳ.

ದುರಿತವೆತ್ತಣದೊ ದುರ್ಗತಿಯೆಲ್ಲಿಹುದೊ । ಹರಿ ಹರಿ ಹರಿಯೆಂದು ಸ್ಮರಿಸುವ ಜನರಿಗೆ ॥ ಪಲ್ಲ ॥ ಸ್ನಾನವೇತಕೆ ಸಂಧ್ಯಾ ಜಪತಪವೇತಕೆ । ಮೌನವೇತಕೆ ಮಾಸ ವ್ರತವೇತಕೆ ॥ ಮಾನಸದಲಿ ವಿಷ್ಣುಪಾದ ಧ್ಯಾನಿಸುವಂಥ । ಜ್ಞಾನವಂತರ ಸಂಗ ಸುಖದೊಳಿಪ್ಪವರಿಗೆ ॥ ೧ ॥ ತೀರ್ಥವೇತಕೆ ಕ್ಷೇತ್ರಯಾತ್ರೆಯು ಏತಕೆ । ಗೋತ್ರ ಧರ್ಮದ ಪುಣ್ಯ ಬಯಸಲೇಕೆ ॥ ಸೂತ್ರದಿ ಜಗವೆಲ್ಲ ಮೋಹಿಸುವಾತನ । ಸ್ತೋತ್ರದಿಂ ಪಾಡಿ ಹಿಗ್ಗುವ ಭಾಗವತರಿಗೆ ॥ ೨ ॥ ಅಂಗದಂಡನೆಯೇಕೆ ಆತ್ಮಘಾತವೇಕೆ । ತಿಂಗಳ ಚಾಂದ್ರಾಯಣವೇತಕೆ ॥ ಮಂಗಳಮಹಿಮ ಶ್ರೀಪುರಂದರವಿಠಲನ । ಹಿಂಗದರ್ಚನೆಯ ಮಾಡುವ ಭಕ್ತಜನರಿಗೆ ॥ ೩ ॥ ಶ್ರೀಃ ॥

## ೯೦. ರಾಗ ನಾದನಾಮಕ್ರಿಯೆ, ಏಕತಾಳ.

ಬ್ರಹ್ಮಾನಂದದ ಸಭೆಯೊಳಗಲ್ಲಿ । ಸುಮ್ಮನೆ ಇರುತಿಹುದೇನಯ್ಯ ॥ ॥ ಪಲ್ಲ ॥ ಮೂಡದು ಉಣ್ಣದು ಕೂಡದು ಮಾಣದು । ಕಾಡದು ಬೇಡದು ಕಂಗೆಡದು ॥ ನಾಡಮಾತುಗಳ ಬಲ್ಲುದು ಆಡದು । ರೂಢಿಯೊಳಿರುತಿಹುದೇನಯ್ಯ ॥ ೧ ॥ ಪೊಡವಿಗಧಿಕವೆಂಬುವರಿಗೆ ಬಲ್ಲುದು । ಕಡೆ ಮೊದಲಿಲ್ಲದ ಒಡಲಿಹುದು ॥ ಬೆಡಗನರಿವೆನೆಂಬವರಿಗಗೋಚರ । ಪೊಡವಿಯೊಳಗಣ ಭಕ್ತರ ಬಲ್ಲುದು ॥ ೨ ॥ ನಿಲ್ಲದು ನಿಲುಕದು ಎಲ್ಲಿಗೆ ಪೋಗದು । ಬಲ್ಲೆನೆಂಬುವರಿಗಳವಡದು ॥ ಬಲ್ಲಿದ ನಮ್ಮ ಪುರಂದರವಿಟ್ಠಲ । ಗಲ್ಲದೆ ತಿಳಿಯದು ಜಗದೊಳಗೆ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೯೧. ರಾಗ ಕಲ್ಯಾಣಿ, ಅಟತಾಳ.

ಯಾಕೆ ಕಳವಳಿಸುತಿ ಪಡುವೆ ಎಲೆ ಮರುಳೆ ॥ ಪಲ್ಲ ॥ ಲೋಕ ಮೂರನು ಆಳ್ವ ಶ್ರೀನಿವಾಸನು ನಮ್ಮ। ಸಾಕಲಾರದೆ ಬಿಡುವನೆ ಮರುಳೆ ॥ ಅನು ಪಲ್ಲ ॥ ಕಲ್ಲು ಪಡೆಯಲ್ಲಿ ಹುಟ್ಟಿರುವ ಮಂಡೂಕಕೆ। ಅಲ್ಲಿ ತಂದಿಡುವ ರಾರೊ ॥ ಎಲ್ಲವನು ತೊರೆದಿರುವ ಅರಣ್ಯವಾಸಿಯು । ಅಲ್ಲಿ ಸಲಹದೆ ಬಿಡುವನೇ ಮರುಳೆ ॥ ೧ ॥ ಅಡವಿಯೊಳು ಹುಟ್ಟುವ ಮೃಗಜಾತಿಗಳಿಗೆಲ್ಲ । ಬಿಡದೆ ತಂದಿಡುವರಾರೊ ॥ ಗಿಡದಿಂದ ಗಿಡಗಳಿಗೆ ಹಾರುವ ಪಕ್ಷಿಗೆ। ಪಡಿಯನಳೆಯದೆ ಬಿಡುವನೇ ಮರುಳೆ॥ ೨ ॥ ಎಂಭತ್ತುನಾಲ್ಕು ಲಕ್ಷ ಜೀವರಾಶಿಗಳನ್ನು। ಇಂಬಾಗಿ ಸಲಹುತಿಹನು ॥ ನಂಬು ಶ್ರೀಪುರಂದರವಿಟ್ಠಲನ ಚರಣವನು । ನಂಬಿದರೆ ಸಲಹದಿಹನೇ ಮರುಳೆ ॥ ೩ ॥

## ೯೨. ರಾಗ ಸುರುಟಿ, ಆದಿತಾಳ.

ಸ್ಮರಿಸುವ ಜನಕೆಲ್ಲ ಭವಭಯ ಪರಿತಾಪಗಳಿಲ್ಲ ॥ ಪಲ್ಲ ॥ ಶರಣಾಗತಜನ ವತ್ಸಲನೆನಿಸಿದ । ಕರಿಗಿರಿ ದುರ್ಗದ ನರಹರಿ ನಿನ್ನನು ॥ ಅನುಪಲ್ಲ ॥ ಪೂರ್ವ ಸುಕೃತದಿಂದ। ಸುಜನಕೆ। ತೋರ್ವೆ ನೀ ಮುದದಿಂದ ॥ ಸಾರ್ವ ಕಾಲದೊಳು ಮಹದಾನಂದದಿ । ದೂರ್ವಾಸರು ಪೂಜಿಪ ಮೂರುತಿ ನಿನ್ನ ॥ ೧ ॥ ಕಾಶಿ ತೀರ್ಥದಿಂದ। ಚಕ್ರ ಪ। ರಾಶರ ತೀರ್ಥದಿಂದ ॥ ಲೇಸಾದ ಮಾರುತಪಾದತೀರ್ಥ ನರ । ಕೇಸರಿ ತೀರ್ಥದಿಂದೊಪ್ಪುವ ನಿನ್ನನು ॥ ೨ ॥ ನೀನಿಹ ಕ್ಷೇತ್ರದೊಳು। ಸೇರಿಹ। ವಾನರ ಪಕ್ಷಿಗಳು ॥ ಮಾನವಾದಿ ಬಹು ಪ್ರಾಣಿಸಮೂಹಕೆ । ಏನು ಪುಣ್ಯ ಫಲವಿರುವುದೊ ತಿಳಿಯದು ॥ ೩ ॥ ಅತ್ತಿಯ ಮರದಲ್ಲಿ। ಕಾಯ್ಗಳು। ಹತ್ತಿರುವಂದದಲಿ॥ ಮೊತ್ತಮೊತ್ತವಾದ ಬ್ರಹ್ಮಾಂಡ ನಿನ್ನೊಳು । ಹತ್ತಿಕೊಂಡಿಪ್ಪುದನಂತ ಕೋಟಿ ಯೆಂದು ॥ ೪ ॥ ಅಡವಿಯ ಮೃಗಗಳಿಗೆ ।. ಬಹುಬಗೆ। ಗಿಡಲತೆ ಮರಗಳಿಗೆ ॥ ಒಡೆಯ ನೀನಲ್ಲದೆ ಅನ್ನೋದಕಗಳ । ಕೊಡುವರೆ ಮನುಜರು ನೀ ಗತಿ ಸಲಹೆಂದು ॥ ೫ ॥ ಕ್ಷುದ್ರ ದೈತ್ಯರ ಗಂಡ । ಕರುಣಸ । ಮುದ್ರ ತಿಮಿರ ಚಂಡ ॥ ರೌದ್ರದಿ ಅಸುರರ ಮರ್ದಿಸಿ ಲೋಕೋ ।

ಪದ್ರವ ಬಿಡಿಸಿದ ರುದ್ರಾಂತರ್ಗತ ನಿನ್ನ ॥ ೬ ॥ ಭೂತ ಗ್ರಹಾದಿಗಳು । ಸೋಕಿದ । ಭೀತಿ ಜ್ವರಾದಿಗಳು ॥ ಚೇತೋಮುಖ ನಿನ್ನ ನೋಡಲು ಇನ್ನಾ । ಪಾತಕವಳಿದು ಯಾತನೆ ಕಳೆವುದು ॥ ೭ ॥ ಲಕ್ಷ್ಮಿಸಹಿತವಾಗಿ । ಭಕ್ತರ । ರಕ್ಷಿಸುವುದಕಾಗಿ ॥ ಲಕ್ಷ್ಮಣ ಯುಕ್ತದಿ ಬಂದು ನಿಂದೆ ಶ್ರೀ । ಲಕ್ಷ್ಮಿನರಸಿಂಹ ನಿನ್ನ ಚರಿತ್ರೆಯು ॥ ೮ ॥ ಕರಿಗಿರಿ ನರಸಿಂಹ । ಭಕ್ತರ । ದುರಿತದಂತಿ ಸಿಂಹ ॥ ಪರಿಪಾಲಿಸು ನಾ ಮೊರೆಹೊಕ್ಕೆನು ನಿನ್ನ । ಗುರು ಪುರಂದರವಿಟ್ಠಲ ನಿನ್ನನು ॥ ೯ ॥ ಶ್ರೀಃ ॥

## ೯೩. ರಾಗ ಮೋಹನ, ಅಟತಾಳ.

ಹರಿಕಥಾಮೃತ ಸೇವೆ ಹರಿದಾಸರಲ್ಲದಲೆ । ದುರುಳ ಮೂಢರು ಬಲ್ಲರೆ ॥ ॥ ಪಲ್ಲ ॥ ಸ್ತನ್ಯಪಾನದ ಸವಿಯ ಚಿಣ್ಣರರಿಯುವಂತೆ । ಮಣ್ಣ ಬೊಂಬೆಯು ಬಲ್ಲುದೆ ॥ ಅನ್ನಪಾನದ ಸವಿಯ ಕೊನೆನಾಲಿಗರಿವಂತೆ । ಅಣಿಮಾಡಿ ಕೊಡುವಂಥ ಕರ ಬಲ್ಲುದೆ ॥ ೧ ॥ ನವನೀರದಾರ್ಭಟಕೆ ನವಿಲುಗಳು ನಲಿವಂತೆ । ಕಾವುಕಾವೆಂಬ ಕಾಕವು ನಲಿವುದೆ ॥ ದಿವಸಾಧಿಪತಿಯುದಿಸಲರಳುವಬ್ಜಗಳಂತೆ । ದಿವಸಾಂಧ ಪಕ್ಷಿಗಳು ಹರುಷಿಸುವುವೆ ॥ ೨ ॥ ಮೊಲ್ಲೆ ಮಲ್ಲಿಗೆ ಮುಡಿಯಬಲ್ಲ ಮಾನವರಂತೆ । ಭಲ್ಲೂಕಗಳು ಅದರ ಬಗೆ ಬಲ್ಲುವೆ ॥ ಫುಲ್ಲಾಕ್ಷ ರಘುಪತಿ ಪುರಂದರವಿಟ್ಠಲನ । ಬಲ್ಲ ಸಜ್ಜನರಂತೆ ಖುಲ್ಲರರಿಯುವರೆ ॥ ೩ ॥ ಶ್ರೀಃ ॥

## ೯೪. ರಾಗ ಕಾಂಬೋಧಿ, ಝಂಪೆತಾಳ.

ಆರು ಬದುಕಿದರಯ್ಯ ಹರಿ ನಿನ್ನ ನಂಬಿ ॥ ಪಲ್ಲ ॥ ತೋರು ಈ ಜಗದೊಳಗೆ ಒಬ್ಬರನು ಕಾಣೆ ॥ ಅನುಪಲ್ಲ ॥ ಕರಪತ್ರದಿಂದ ತಾಮ್ರಧ್ವಜನ ತಂದೆಯ । ಕೊರಳ ಕೊಯಿಸಿದೆ ನೀನು ಕುಂದಿಲ್ಲದೆ ॥ ಮರುಳನಂದದಿ ಪೋಗಿ ಭೃಗುಮುನಿಯ ಕಣ್ಣೊಡೆದೆ । ಅರಿತು ತ್ರಿಪುರಾಸುರನ ಹೆಂಡಿರನು ಬೆರೆದೆ ॥ ೧ ॥ ಕಲಹ ಬಾರದ ಹಾಗೆ ಕರ್ಣನನು ನೀ ಕೊಂದೆ । ಸುಲಭದಲಿ ಕೌರವರ ಮನೆಯ ಮುರಿದೆ ॥ ನೆಲನ ಬೇಡುತ ಪೋಗಿ

ಬಲಿಯು ತನುವನು ತುಳಿದೆ । ಮೊಲೆಯನುಣಿಸಲು ಬಂದ ಪೂತನಿಯ ಕೊಂದೆ ॥ ೨ ॥ ತಿರಿದುಂಬ ದಾಸರ ಕೈಲಿ ಕಪ್ಪವ ಕೊಂಬೆ । ಗರುಡವಾಹನ ನಿನ್ನ ಚರಿಯವರಿಯೆ ॥ ಧೊರೆ ಪುರಂದರವಿಠಲ ನಿನ್ನನ್ನು ನಂಬಿದರೆ । ತಿರುಪೆಯೂ ಹುಟ್ಟಲೊಲ್ಲದು ಕೇಳೊ ಹರಿಯೆ ॥ ೩ ॥ ಶ್ರೀಃ ॥

೯೫. ರಾಗ ನಾದನಾಮಕ್ರಿಯೆ, ಅಟತಾಳ.

ಲಂಗೋಟಿ ಬಲುಪೊಳ್ಳೆದಣ್ಣ । ಒಬ್ಬ । ಹಂಗಿಲ್ಲದೆ ಮಡಿಗೆ ಒದಗುವ ದಣ್ಣ ॥ ಪಲ್ಲ ॥ ಬಡವರಿಗಾಧಾರವಣ್ಣ । ಈ ಲಂಗೋಟಿ । ಬೈರಾಗಿಗಳ ಭಾಗ್ಯವಣ್ಣ ॥ ಕಡುಕಳ್ಳರಿಗೆ ಗಂಡ ಮಡಿಧೋತ್ರಗಳ ಮಿಂಡ । ನಡುಗುವ ಸಮಯಕ್ಕೆ ಮಡಿಗೆ ಒದಗುವಂಥ ॥ ೧ ॥ ಜಿತಮನ ಸನ್ಯಾಸಿಗಳಿಗಿದೆ ಕೌಪೀನ । ವ್ರತವುಳ್ಳ ಬ್ರಹ್ಮಚಾರಿಗೆ ಮುಖ್ಯವು ॥ ಅತಿಶಯವಿದೆ ಆಂಜನೇಯ ನಾರದರಿಗೆ । ಗತಿಯಿಲ್ಲದವರಿಗೆ ಮಿತವಾಗಿ ಇರುವಂಥ ॥ ॥ ೨ ॥ ದುಡ್ಡು ಮುಟ್ಟದಂತೆ ದೊರಕುವ ವಸ್ತುವು । ದೊಡ್ಡ ಅರಣ್ಯಾದಿ ಭಯವಿಲ್ಲವು ॥ ಹೆಡ್ಡರೆಂಬುವರೇನೊ ಲಂಗೋಟಿ ಜನರನ್ನು । ದೊಡ್ಡವರೆಂದು ವಂದಿಸುವರು ಯತಿಗಳ ॥ ೩ ॥ ಮೋಕ್ಷಮಾರ್ಗಕೆ ಕಲ್ಪವೃಕ್ಷವೀ ಲಂಗೋಟಿ । ಭಿಕ್ಷಗಾರರಿಗೆಲ್ಲ ಅನುಕೂಲವು ॥ ತತ್‌ಕ್ಷಣದೊಳಗೆ ಕಾರ್ಯಗಳ ತೂಗಿಸಿ ಮಾನ । ರಕ್ಷಣೆಗೆ ಬಹು ರಮ್ಯವಾಗಿರುವಂಥ ॥ ॥ ೪ ॥ ಮಡಿವಾಳರಿಗೆ ಶತ್ರು ಮಠದಯ್ಯಗಳ ಮಿತ್ರ । ಪೊಡವಿಯೊಳ್ ಯಾಚಕರಿಗೆ ನೆರವು ॥ ದೃಢಭಕ್ತ ಬಲಿಚಕ್ರವರ್ತಿಗೋಸ್ಕರ ನಮ್ಮ । ಒಡೆಯ ಶ್ರೀಪುರಂದರವಿಠಲ ಧರಿಸಿದಂಥ ॥ ೫ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೯೬. ರಾಗ ಪೂರ್ವಿ (ಕಾನಡ), ಅಟತಾಳ.

ಆತನ ಪಾಡುವೆ ಅನವರತ । ಪ್ರೀತಿಯಿಂದಲಿ ತನ್ನ ಭಕುತರ ಸಲಹುವ ॥ ಪಲ್ಲ ॥ ಆವಾತನ ಕೀರ್ತಿ ಪರೀಕ್ಷಿತ ಕೇಳಿ । ಪಾವನವಾದನು ಮುಜ್ಜಗವರಿಯೆ ॥ ಭಾವ ಶುದ್ಧಿಯಲಿ ಶುಕನಾರ ಪೊಗಳುವ । ಆವಾಗ

ಪ್ರಹ್ಲಾದ ಆರ ನೆನೆವನಯ್ಯ ॥ ೧ ॥ ಶಿಲೆಯು ಬಾಲೆಯು ಮಾಡಿದ ಪಾದ ವಾರದು । ನಳಿನಸಂಭವನ ಪೆತ್ತವರಾರು ॥ ಕಲಿಯುಗ ಜನರಿಗೆ ಆರ ನಾಮವೆ ಗತಿ । ಇಳೆಯ ಭಾರವನಿಳುಹಿ ಸಲಹಿದರಾರಯ್ಯ ॥ ೨ ॥ ದ್ರುಪದನ ಸುತೆ ಅಭಿಮಾನ ರಕ್ಷಕರಾರು । ನೃಪ ಧರ್ಮಜಗೆ ರಕ್ಷಕ ನಾರು ॥ ಕೃಪೆಯಿಂದ ವಿದುರನ ಮನೆಯಲುಂಡವನಾರು । ಆಪತ್ಕಾಲದಿ ಗಜನ ಸಲಹಿದರಾರಯ್ಯ ॥ ೩ ॥ ಅತಿಶಯದಿಂದ ಅರ್ಜುನಗೆ ಸಾರಥಿ ಯಾಗಿ । ರಥವನೇರಿ ನಡೆಯಿಸಿದವರಾರು ॥ ಪೃಥಿವಿಯೆಲ್ಲವ ಬಲಿಯಾರಿ ಗೊಪ್ಪಿಸಿದನು । ಮತಿವಂತ ಧ್ರುವನ ರಕ್ಷಕರಾರು ಪೇಳಯ್ಯ ॥ ೪ ॥ ಸಾಗರನ ಮಗಳಿಗು ಆರ ನಾಮವೆ ಗತಿ । ಯೋಗದಿ ನಾರದನಾರ ಭಜಿ ಪನು ॥ ರಾಗರಹಿತ ಹನುಮಂತನೊಡೆಯನಾರು । ಭಾಗವತರ ಪ್ರಿಯ ಪುರಂದರವಿಠಲ ॥ ೫ ॥ ಶ್ರೀಃ ॥

೯೭. ರಾಗ ಮಲಹರಿ, ತ್ರಿಪುಟತಾಳ.

ಪದುಮನಾಭ ಪರಮಪುರುಷ ಪರಂಜ್ಯೋತಿಸ್ವರೂಪ । ವಿದುರವಂದ್ಯ ವಿಮಲಚರಿತ ವಿಹಂಗಾಧಿರೋಹಣ ॥ ಉದಧಿವಾಸ ಉರಗಶಯನ ಉನ್ನತೋನ್ನತ ಮಹಿಮ । ಯದುಕುಲೋತ್ತಮ ಯಜ್ಞರಕ್ಷಕ ಅಜ್ಞ ಶಿಕ್ಷಕ ರಾಮನಾಮ ॥ ವಿಭೀಷಣಪಾಲಕ ನಮೋ ನಮೋ । ಇಭವರ ದಾಯಕ ನಮೋ ನಮೋ ॥ ಶುಭಪ್ರದ ಸುಮನೋಹಿತ (ಸುಜನಮ ನೋರಂಜನ) । ಅಭಿನವ ಪುರಂದರವಿಠಲ ॥ ಶ್ರೀಃ ॥

೯೮. ರಾಗ ಪೂರ್ವಿ, ಆದಿತಾಳ.

ಕುರುಡು ನಾಯಿ ತಾ ಸಂತೆಗೆ ಬಂತಂತೆ । ಅದು ಏತಕೆ ಬಂತೋ ॥ ॥ ಪಲ್ಲ ॥ ಖಂಡ ಸಕ್ಕರೆ ಹಿತವಿಲ್ಲವಂತೆ । ಖಂಡ ಎಲುಬು ಕಡಿದಿತಂತೆ ॥ ಹೆಂಡಿರ ಮಕ್ಕಳ ನೆಚ್ಚಿತಂತೆ । ಕೊಂಡುಹೋಗುವಾಗ ಯಾರಿಲ್ಲವಂತೆ ॥ ॥ ೧ ॥ ಭರದಿ ಅಂಗಡಿ ಹೊಕ್ಕಿತಂತೆ । ತಿರುವಿ ದೊಣ್ಣೆಯಲಿ ಇಕ್ಕಿದರಂತೆ ॥ ಮರೆತರಿನ್ನು ವ್ಯರ್ಥವಂತೆ । ನರಕದೊಳಗೆ ಬಿದ್ದಿತಂತೆ ॥ ೨ ॥ ವೇದವಾದ ಗಳನೋದಿತಂತೆ । ಗಾದೆ ಮಾಡಿ ಬಿಟ್ಟಿತಂತೆ ॥ ಹಾದಿ ತಪ್ಪಿ ನಡೆದು

ಯಮನ । ಬಾಧೆಗೆ ತಾ ಗುರಿಯಾಯಿತಂತೆ ॥ ೩ ॥ ನಾನಾ ಜನ್ಮವನೆತ್ತಿ ತಂತೆ । ಮಾನವನಾಗಿ ಹುಟ್ಟಿತಂತೆ ॥ ಕಾನನ ಕಾನನ ತಿರುಗಿತಂತೆ । ತಾನು ತನ್ನನೆ ಮರೆಯಿತಂತೆ ॥ ೪ ॥ ಮಂಗನ ಕೈಯ ಮಾಣಿಕ್ಯದಂತೆ । ಹಾಂಗೂ ಹೀಂಗೂ ಕಳೆದೀತಂತೆ ॥ ರಂಗ ಪುರಂದರವಿಠಲನ ಮರೆದು । ಭಂಗ ಬಹಳ ಪಟ್ಟಿತಂತೆ ॥ ೫ ॥ ಶ್ರೀಃ ॥

೯೯. ರಾಗ ಕಾಂಬೋಧಿ, ಝಂಪೆತಾಳ.

ಮಂದಮತಿಯೋ ನಾನು ಮದನಜನಕನು ನೀನು । ಕುಂದುಗಳನೆಣಿಸದೆ ದಯಮಾಡಿ ಸಲಹೊ ॥ ಪಲ್ಲ ॥ ಪಾಪಕರ್ತನು ನಾನು ಪಾಪನಾಶನ ನೀನು । ಕೋಪ ಮದ ಮತ್ಸರದಿ ಸುಳಿವೆ ನಾನು ॥ ತಾಪವನು ತರಿದು ನಿರ್ಭಯವ ಮಾಡುವೆ ನೀನು । ರೂಪ ಛಾಯಕೆ ಮರುಳುಗೊಂಬೆನೋ ನಾನು ॥ ೧ ॥ ಶರಣರಕ್ಷಕ ನೀನು ಪರಮಪಾತಕಿ ನಾನು । ದುರಿತ ಪರ್ವತವ ಪರಿಹರಿಪೆ ನೀನು ॥ ಮರುಳುಗೊಂಬೆನು ನಾನು ಅರಿತು ರಕ್ಷಿಪೆ ನೀನು । ಗರುವಾಹಂಕಾರಿ ನಾನು ಅಗವ್ಯ ನೀನು ॥ ೨ ॥ ಮಂದ ಭಾಗ್ಯನು ನಾನು ಇಂದಿರಾಪತಿ ನೀನು । ಹಿಂದು ಮುಂದಿನ ಸುದ್ದಿ ಅರಿಯದವ ನಾನು ॥ ತಂದೆ ಶ್ರೀಪುರಂದರವಿಟ್ಠಲರಾಯನೆ । ಎಂದೆಂದು ಭಕ್ತರನು ಸಲಹುವೆಯೊ ನೀನು ॥ ೩ ॥ ಶ್ರೀಃ ॥

೧೦೦. ರಾಗ ಕಾಂಬೋಧಿ, ಝಂಪೆತಾಳ.

ಮಾನಭಂಗವ ಮಾಡಿ ಮತ್ತೆ ಉಪಚಾರಗಳ । ನೇನ ಮಾಡಿದರಲ್ಲಿ ಇರಬಾರದಯ್ಯ ॥ ಪಲ್ಲ ॥ ಕುಂದುಗಳನೆತ್ತಿ ಕುಚೋದ್ಯ ಕುಮಂತ್ರಗಳ । ನೊಂದೊಂದು ವರ್ಣಗಳನೆತ್ತಿ ಜರೆದು ॥ ಮುಂದೆ ಭಂಗಿಸಿ ಹಿಂದೆ ಉಂಬಳಿಯ ನೀಡುವುದು । ಮುಂದಲೆಯ ಕೊಯ್ದು ಮುಡಿಗ್ಹೂವ್ವ ಮುಡಿಸಿದಂತೆ ॥ ೧ ॥ ನಗೆಗೇಡು ಮಾಡಿ ನಾಲ್ವರ ಮುಂದೆ ಮೊಗಗೆಡಿಸಿ । ಮಗುಳೆ ಬಾರೆಂದು ಮನ್ನಿಸಿ ಲಾಲಿಸಿ ॥ ಮಿಗಿಲಾದ ವಸ್ತ್ರಗಳ ಭೂಷಣಂಗಳನೀಯೆ । ತೊಗಲ ಮೂಗ್ಹರಿದು ಚಿನ್ನದ ಮೂಗನಿತ್ತಂತೆ ॥ ೨ ॥

ಅರ್ಥಹೋದರೆ ಪ್ರಾಣ ಪ್ರಾಣಹೋದರೆ ಮಾನ । ವ್ಯರ್ಥವಾಗದಹಾಗೆ ಕಾಯಬೇಕು ॥ ಕರ್ತ ಶ್ರೀಪುರಂದರವಿಟ್ಠಲರಾಯನ । ಚಿತ್ತದಲಿ ನೆನೆ ನೆನೆದು ಸುಖಿಯಾಗಬೇಕು ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೦೧. ರಾಗ ಆನಂದಭೈರವಿ, ಅಟತಾಳ.

ಮುಪ್ಪಿನ ಗಂಡನ ಒಲ್ಲೆನು ನಾನು ॥ ಪಲ್ಲ ॥ ತಪ್ಪದೆ ಪಡಿಪಾಟ ಪಡಲಾರೆನಕ್ಕ ॥ ಅನುಪಲ್ಲ ॥ ಉದಯದಲ್ಲೇಳಬೇಕು ಉದಕ ಕಾಸಲುಬೇಕು । ಬದಿಯಲ್ಲಿ ನಾನಿದ್ದು ಬಜೆ ಅರೆಯಬೇಕು ॥ ಹದನಾಗಿ ಎಲೆ ಸುಣ್ಣ ಅಡಕೆ ಕುಟ್ಟಲುಬೇಕು । ಬಿದಿರುಕೋಲನು ಮುಂದೆ ಇಡಬೇಕಕ್ಕ ॥ ೧ ॥ ಮೆತ್ತನೆ ರೊಟ್ಟಿ ಮುದ್ದೆಯ ಮಾಡಬೇಕು । ಒತ್ತಿ ಒದರಿ ಕೂಗಿ ಕರೆಯಲುಬೇಕು ॥ ಪಿತ್ತ ವಾಕರಿಕೆಯು ಮೂಗಿನ ಸಿಂಬಳ । ಮತ್ತೆ ವ್ಯಾಳ್ಯಕೆ ಎದ್ದು ತೊಳೆಯಬೇಕಕ್ಕ ॥ ೨ ॥ ಗೋಣಿ ಹಾಸಲುಬೇಕು ಬೆನ್ನು ಗುದ್ದಲುಬೇಕು । ಗೋಣು ಹಿಡಿದು ಮೇಲಕೆತ್ತಬೇಕು ॥ ಶ್ರೀನಿಧಿ ಪುರಂದರವಿಠಲನ್ನ ನೆನೆಯುತ್ತ । ನಾನೊಂದು ಮೂಲೇಲಿ ಮರಗಬೇಕಕ್ಕ ॥ ೩ ॥ ಶ್ರೀಃ ॥

## ೧೦೨. ರಾಗ ಕಾಂಬೋಧಿ, ಝಂಪೆತಾಳ.

ಯಾಕೆ ನಿರ್ದಯನಾದೆ ಎಲೊ ದೇವನೆ ॥ ಪಲ್ಲ ॥ ಶ್ರೀಕಾಂತ ಎನ ಮೇಲೆ ಎಳ್ಳಷ್ಟು ದಯವಿಲ್ಲ ॥ ಅನುಪಲ್ಲ ॥ ಕಂಗೆಟ್ಟು ಕಂಭದಲಿ ಒಡೆದು ಬಳಲಿ ಬಂದು । ಹಿಂಗದೆ ಪ್ರಹ್ಲಾದನಪ್ಪಿಕೊಂಡೆ ॥ ಮಂಗಳ ಪದವಿತ್ತು ಮನ್ನಿಸಿದೆ ಆವ ನಿನಗೆ । ಭಂಗಾರವೆಷ್ಟು ಕೊಟ್ಟನು ಪೇಳೊ ಹರಿಯೆ ॥ ॥ ೧ ॥ ಸಿರಿದೇವಿಗ್ಹೇಳದೆ ಸೆರಗು ಸಂವರಿಸದೆ । ಗರುಡನ ಮೇಲೆ ಗಮನವಾಗದೆ ॥ ಭರದಿಂದ ನೀ ಬಂದು ಕರಿಯನುದ್ಧರಿಸಿದೆ । ಕರಿರಾಜ ಎಷ್ಟು ಕನಕವ ಕೊಟ್ಟ ಹರಿಯೆ ॥ ೨ ॥ ಅಜಮಿಳನು ಅಣ್ಣನೆ ವಿಭೀಷಣನು ತಮ್ಮನೆ । ನಿಜದಿ ರುಕ್ಮಾಂಗದನು ನಿನ್ನ ಮೊಮ್ಮಗನೆ ॥ ಭಜನೆಗವರೇ ಹಿತರೆ ನಾ ನಿನಗೆ ಅನ್ಯನೆ । ತ್ರಿಜಗಪತಿ ಸಲಹೆನ್ನ ಪುರಂದರವಿಠಲ ॥ ೩ ॥

## ೧೦೩. ರಾಗ ಹಿಂದೂಸ್ಥಾನಿಕಾಪಿ, ಆದಿತಾಳ.

ಸಾಧುಸಜ್ಜನರ ಸಂಗವ ಸೇರಿ ಹಾದರನಾದರೆ ಕಲ್ತೇನೊ ॥ ಪಲ್ಲ ॥ ಅಸಾಧುಜನರ ಸಂಗವ ಮಾಡಿ ಅಜ್ಞಾನ ಪತಿಯ ಕೂಡಿದ್ದೆನೊ ॥ ಅನುಪಲ್ಲ ॥ ಮಿಥ್ಯಾಜ್ಞಾನ ಎಂಬುವ ಪತಿಗೆ ಮೆಚ್ಚುಮದ್ದು ಮಾಡಿದೆನೊ । ಸ್ವಾರ್ಥವೆಂಬೊ ಅತ್ತೆಯ ಕಣ್ಣು ಮತ್ತೆ ನಾನು ಕಳೆದೆನೊ ॥ ೧ ॥ ಆಸೆಯೆಂಬೊ ಮಾವಗೆ ನಾನು ಗ್ರಾಸ ಹಾಕದೆ ಕೊಂದೆನೊ । ಮೋಸದ ಆರು ಮೈದಂದಿರನು ದೇಶಾಂತರಕೆ ಓಡಿಸಿದೆನೊ ॥ ೨ ॥ ತತ್ವ ದ್ವೇಷ ಎಂಬುವ ಕೂಸಿಗೆ ಕುತ್ತಿಗೆಗುರ್ಲು ಹಾಕಿದೆನೊ । ಕರ್ತೃ ಪುರಂದರ ವಿಟ್ಠಲನೆಂಬ ಮೆಚ್ಚಿನ ಮಿಂಡನ ಕೂಡಿದೆನೊ ॥ ೩ ॥ ಶ್ರೀಃ ॥

## ೧೦೪. ರಾಗ ಕಾಂಬೋಧಿ, ಅಟತಾಳ.

ಹರಿನಾಮದರಗಿಣಿಯು ಹಾರುತಿದೆ ಜಗದಿ । ಪರಮ ಭಾಗವತರು ಬಲೆಯ ಬೀಸುವರು ॥ ಪಲ್ಲ ॥ ಕೋಪವೆಂಬ ಮಾರ್ಜಾಲ ಕಂಡರೆ ನುಂಗುವುದು । ತಾಪವೆಂಬುವ ಹುಲಿಯು ಕೊಂಡೊಯ್ಯುವುದು ॥ ಕಾಪಾಡಲದನೊಯ್ದು ಹೃದಯದೊಳಗಿಂಬಿಟ್ಟು । ಆಪತ್ತಿಗೊದಗುವುದು ಆ ಮುದ್ದು ಅರಗಿಣಿಯು ॥ ೧ ॥ ದಾರಿಯೊಳು ನಡೆವಾಗ ಚೋರರುಪಟಳವಿಲ್ಲ । ಮಾರಿ ಬಂದರೆ ಅದನು ಹೊಡೆದು ನೂಕುವುದು ॥ ಕ್ರೂರ ಯಮಭಟರನ್ನು ಮೂಗು ರೆಕ್ಕೆಲಿ ಬಡಿದು । ದಾರಿ ತೋರುವುದು ಮುರಾರಿ ಪಟ್ಟಣಕೆ ॥ ೨ ॥ ಎಷ್ಟು ವರ್ಣಿಸಲಿ ನಾ ಈ ಮುದ್ದು ಅರಗಿಣಿಯ । ಹೊಟ್ಟೆಯೊಳಗೀರೇಳು ಜಗವನಿಂಬಿಟ್ಟು ॥ ಸೃಷ್ಟೀಶ ಪುರಂದರವಿಟ್ಠಲನ ನೆನೆನೆನೆದು । ಮುಟ್ಟಿ ಭಜಿಸುವುದು ಈ ಮುದ್ದು ಅರಗಿಣಿಯು ॥ ೩ ॥

## ೧೦೫. ರಾಗ ಪೂರ್ವಿಕಲ್ಯಾಣಿ, ಅಟತಾಳ.

ಹರಿಚಿತ್ತ ಸತ್ಯ ಹರಿಚಿತ್ತ ॥ ಪಲ್ಲ ॥ ನರಚಿತ್ತಕೆ ಬಂದದ್ದು ಲವಲೇಶ ನಡೆಯದು ॥ ಅನುಪಲ್ಲ ॥ ಸುದತಿಮಕ್ಕಳ ಭಾಗ್ಯ ಬಯಸೋದು ನರಚಿತ್ತ । ಮದುವ್ಯಾಗದಿರುವುದು ಹರಿಚಿತ್ತವು ॥ ಕುದುರೆ ಅಂದಣ ಆನೆ

ಬಯಸೋದು ನರಚಿತ್ತ । ಸದಚಾರಿಯಾಗೋದು ಹರಿಚಿತ್ತವಯ್ಯ ॥ ॥ ೧ ॥ ವಿಧವಿಧ ಯಾತ್ರೆಯ ಬಯಸೋದು ನರಚಿತ್ತ । ಒದಗಿ ಬರುವ ರೋಗ ಹರಿಚಿತ್ತವು ॥ ಸದಾ ಅನ್ನದಾನವ ಬಯಸೋದು ನರಚಿತ್ತ । ಉದರಕ್ಕೆ ಅಳುವುದು ಹರಿಚಿತ್ತವಯ್ಯ ॥ ೨ ॥ ಧರಣಿಯನಾಳಬೇಕೆಂಬುದು ನರಚಿತ್ತ । ಪರರ ಸೇವಿಸುವುದು ಹರಿಚಿತ್ತವು ॥ ಪುರಂದರವಿಠಲನ ಬಯಸೋದು ನರಚಿತ್ತ । ದುರಿತವ ಕಳೆವದೆ ಹರಿಚಿತ್ತವಯ್ಯ ॥ ೩ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೦೬. ರಾಗ ಸೌರಾಷ್ಟ್ರ, ಆದಿತಾಳ.

ಇದೇ ಸಮಯ ರಂಗ ಬಾರೆಲೊ । ಇದೇ ಸಮಯ ಕೃಷ್ಣ ಬಾರೆಲೊ ॥ ॥ ಪಲ್ಲ ॥ ಅತ್ತಿಗೆ ಲಕ್ಷ ಬತ್ತ ಶೀಲಳೋ । ಅಷ್ಟು ಆಗದೆ ಅವಳೇಳಳೊ ॥ ಅತ್ತೆ ಪುರಾಣದಿ ಲೋಲಳೊ ಸರಿ । ಹೊತ್ತಿನ ವೇಳೆಗೆ ಬರುವಳೊ ॥ ॥ ೧ ॥ ಮಾವ ಎನ್ನಲಿ ಅವಿಶ್ವಾಸಿಯೋ ಮ । ದುವೆಯಾದ ಗಂಡ ಉದಾಸಿಯೊ ॥ ಭಾವನು ಎನ್ನ ಸೇರ ಹೇಸಿಯೊ ನೀ । ನೀವ್ಯಾಳ್ಯಕೆ ಬಂದರೆ ವಾಸಿಯೊ ॥ ೨ ॥ ತಂದೆ ತಾಯಿ ಆಸೆ ಮಾಡೆನೊ ಎನ್ನ । ಕಂದನ ಮೇಲೆ ಮನಸಿಡೆನೊ ॥ ಮಂದರಧರ ಪುರಂದರವಿಠಲ ನೀ । ಬಂದರೆ ಚರಣಸೇವೆ ಮಾಳ್ಪೆನೊ ॥ ೩ ॥ ಶ್ರೀಃ ।

## ೧೦೭. ರಾಗ ಆನಂದಭೈರವಿ, ಝಂಪುತಾಳ.

ಏನ ಪೇಳಲೆ ಗೋಪಿ ನಿನ್ನ ಮಗನ ಜಾಲ । ಮಾನ ತಪ್ಪಿ ಬಂದ ಮನೆಯೊಳಗೆ ॥ ಪಲ್ಲ ॥ ಕೊಡ ಹಾಲು ಕುಡಿದನೆ ಗಡಿಗೆಯ ಒಡೆದನೆ । ಅಡಗಿದ್ದನೆ ದೊಡ್ಡ ಕೊಡದೊಳಗೆ ॥ ಹುಡುಗ ಸಿಕ್ಕಿದನೆಂದು ಹೊಡೆಯಲಿ ಹೋದರೆ । ಬಡವರ ಮಗನೇನೆ ಹೊಡೆಯಲಿಕ್ಕೆ ॥ ೧ ॥ ಅಳಿಯನ ವೇಷದಿ ಮಗಳ ಕರೆಯ ಬಂದ । ಕಲಹಮಾಡಿ ತಾ ಕಳಿಸೆಂದ ॥ ಒಲುಮೆಯಿಂದಲಿ ತಿಂಗಳೆರಡಿಟ್ಟುಕೊಂಡರೆ । ಗಿಳಿಯಂಥ ಹೆಣ್ಣಿನ ಕೆಡಿಸಿದನೆ ಗೋಪಿ ॥ ॥ ೨ ॥ ಇಷ್ಟೊಂದು ಸಿಟ್ಟೇಕೆ ಚಿಣ್ಣ ಕೃಷ್ಣನ ಮೇಲೆ । ಪುಟ್ಟಿಸಬೇಡಿರೆ

ಅನ್ಯಾಯುವ ॥ ಸೃಷ್ಟಿಗೊಡೆಯು ನಮ್ಮ ಪುರಂದರವಿಠಲನ । ದೃಷ್ಟಿಸಿ ನೋಡಿರೆ ತೊಟ್ಟಿಲಿನೊಳಗೆ । ೩ ॥ ಶ್ರೀಃ ॥

### ೧೨೮. ರಾಗ ಕಲ್ಯಾಣಿ, ಅಟತಾಳ.

ಕಳ್ಳ ಸಿಕ್ಕಿದ ಕಾಣಿರೇ । ಎಂದಿನ ಕಡು । ಕಳ್ಳ ಸಿಕ್ಕಿದ ಕಾಣಿರೇ ॥ ಪಲ್ಲ ॥ ಕಳ್ಳ ಸಿಕ್ಕಿದ ಕಾಣೆ ಇನ್ನಿವನ ಬಿಡೆಸಲ್ಲ । ಎಲ್ಲಿ ನೋಡಲು ಬ್ರಹ್ಮಾದ್ಯರಿಗೆ ಸಿಕ್ಕದಂಥ ॥ ಅನುಪಲ್ಲ ॥ ಕಡೆದ ಬೆಣ್ಣೆಯ ತೆಗೆದಿಟ್ಟ ಬಳಿಕ ತನ್ನ । ಉಡಿಯೊಳರಿಯದಂತೆ ಬೆಕ್ಕು ತಂದು ॥ ಕಡಗೋಲ ತೆಗೆದು ಬಚ್ಚಿಡೆ ನಾ ಪೋದರೆ । ಪಿಡಿದು ತೋರುತ ಬೆಣ್ಣೆಯನಿತ್ತು ಮೆದ್ದಂಥ ॥ ೧ ॥ ಒಂದು ರಾತ್ರಿಯಲಿ ಮಲಗುತೆಚ್ಚರದಲಿ । ಕಂದಗೆ ಮೊಲೆಯೂಡಲು ಬಂದು ॥ ಒಂದು ಕೈಯಲಿ ಕೂಸಿನ ಕೈಯ ಪಿಡಿದು ಮ । ತ್ತೊಂದು ಕೈಯಲಿ ಎನ್ನ ಕುಚಗಳ ಪಿಡಿದಂಥ ॥ ೨ ॥ ಹೆರರ ಮನೆಯೊಳುಂಡು ಹೆರರ ಮನೆಯೊಳಿದ್ದು । ಹೆರರ ಭೋಗಿಸುತಿದ್ದ ಗೂಳಿಯಂತೆ ॥ ಇರುಳು ಹಗಲು ಎನ್ನದೆ ಮನೆಮನೆಗಳ । ತಿರುಗುತಲಿಹ ಪುರಂದರವಿಟ್ಠಲ ನೆಂಬ ॥ ೩ ॥ ಶ್ರೀಃ ॥

### ೧೨೯. ಉದಯರಾಗ.

ಗೋಪಿಯರು ಕೃಷ್ಣನ ವಿರಹಪ್ರಳಾಪದಿಂದ । ಮಧುರಾಪುರದ ಬಿಲ್ಲ ಹಬ್ಬವ ಜರದರು ॥ ಪಲ್ಲ ॥ ಅಕ್ರೂರನೆಂಬ ಕಲಿಹೃದಯ ಬಂದು ನಮ್ಮನ । ತಿಕ್ರಮಿಸಿ ಕೃಷ್ಣನ ಪುರಕೆ ನಡೆಸಿದ ॥ ವಕ್ರವಾದನು ನಮ್ಮ ಕ್ರೀಡೆಗಳಿಗೆ ಅಕಟ । ಈ ಕ್ರೂರಗಕ್ರೂರ ಪೆಸರೇತಕೆನುತ ॥ ೧ ॥ ರಥವ ನಿಲ್ಲಿಸದೆ ಮೋಸಹೋದೆವಲ್ಲ ಮನೋ । ರಥಸಿದ್ಧಿ ಕೊನೆಸಾಗಲಿಲ್ಲ ॥ ರತಿಪತಿಯ ಪಿತನಗಲಿ ಕೆಟ್ಟೆವಲ್ಲ ಇನ್ನು । ಗತಿಯಾರು ನಮ್ಮ ಸಂತೈಪರಾರೆನುತ ॥ ॥ ೨ ॥ ಈ ಪಳ್ಳಿಯೊಳು ನಮಗೆ ಬಂದಂಥ ಪ್ರಳಯದ । ಆಪತ್ತುಗಳನೆಲ್ಲ ಪರಿಹರಿಸುವ ॥ ಗೋಪಾಲನಿಂದ ಬಂದ ಈ ಪ್ರಳಯ । ತಾಪ ಹರಿಸಲಾ ಪರುಂಟೆ ಪೇಳಿರೆನುತ ॥ ೩ ॥ ಯುಗವೊಂದು ನಿಮಿಷವಾಗಿದ್ದೆವಲ್ಲ ಅವನ । ನಗೆನೋಟ ಕೂಟಬೇಟೆಗಳಿಂದ ॥ ಅಗಲಿ ಪೋದನು ಕೃಷ್ಣ ಇಂದು

ನಮಗೆ ನಿಮಿಷ । ಯುಗವಾಗಿ ತೋರುತಿನ್ನೇನುಪಾಯುವೆನುತ ॥ ೪ ॥ ಯಾಕೆಮ್ಮ ಪುಟ್ಟಿಸಿದೆ ವಿಧಿಯೇ ನಮಗಿನ್ನೇಕೆ । ಶ್ರೀಕೃಷ್ಣನಿಲ್ಲದ ಷಡಗರ ಭ್ರಮರ ॥ ಕೋಕಿಲಾರವದಿ ಕೋಳುಹೋದೆವಲ್ಲ । ಕಾಕುಮಾಡಿತು ಕಂದರ್ಪನಸ್ತ್ರವು ಎನುತ ॥ ೫ ॥ ಕಂಗಳ ಬಿಟ್ಟಗಲಿ ದೂರದಿ ನಮ್ಮ ಮ । ನಂಗಳಲಿ ನೆಲೆಗೊಂಡು ಇರಲೇತಕೆ ॥ ಭಂಗಪಡಿಸುವ ನಾನಾ ಪರಿಯ ಲಿ ಗೋವಳ । ಹೆಂಗೊಲೆಗೆಳೆವುದನು ನಾವರಿತುದಿಲ್ಲವೆನುತ ॥ ೬ ॥ ಕೊಂಬು ಕೊಂಕಳಲಿ (ಶಲ್ಯಗೋಳ?) ಪಿಡಿದು ಹೆಗಲ । ಕಂಬಳಿಯ ಪೂದಳಿರಲತೆ ಯನುಟ್ಟು ॥ ತುಂಬೆಗುರುಳಲಿ ಎಸೆವ ಕೆಂದೂಳಿ ನೀರ । ಜಾಂಬಕನ ಕಾಣದಿನ್ನೆಂತುಳಿಯುವೆವೆನುತ ॥ ೭ ॥ ಅವನ ಲಾವಣ್ಯಮೂರುತಿ ನೋಡಿ ಕಂಗಳು । ಅವನ ಜಾಣವಿ ನುಡಿಗೇಳಿ ಕಿವಿಯು ॥ ಅವನ ಅಧರಾಮೃತವ ಸವಿಸವಿದು ಜಿಹ್ವೆ । ದಿವಸಗಳ ಕಳೆಯಲಿನ್ನೆಂತುಪಾಯುವೆನುತ ॥ ೮ ॥ ಕೊಳಲ ಧ್ವನಿಯು ಕೇಳಿ ದೂರದಿಂದ ಕೈಯ । ಕೆಲಸಗಳನು ಬಿಟ್ಟು ಬರುವೆವಲ್ಲ ॥ ಕೊಳಲೂದಿ ಸೋಲಿಸುವರಿನ್ನಾರು ಮನದ । ಅಳವರಿತು ನಮ್ಮ ಸಂತೈಪರಾರೆನುತ ॥ ೯ ॥ ಮೌನ ಗೌರಿಯ ನೋನೆ ಯಮುನೆ ಯೊಳಗೆ ನಮ್ಮ । ಮಾನಗಳ ಬಯಲು ಮಾಡಿದ ಮೂರ್ತಿಯ ॥ ಧ್ಯಾನಿ ಸಲು ಕಣ್ಣ ಮುಂದಿದ್ದಂತಿರೆ ನಾವಿ । ನ್ನೇನ ನೆನೆದು ಹಂಬಲಿಸುವೆ ವೆನುತ ॥ ೧೦ ॥ ಕಾರ ಮುಗಿಲೊಳು ಹೊಳೆವ ಮಿಂಚಿನಂತೆ ಮಕುಟ । ಹಾರ ಹೀರಾವಳಿಯು ಪದಕೊಪ್ಪುವ ॥ ವಾರಿಗೆ ಗೋಪಾಲರೊಡನಾಡೊ ನಂದಕು । ಮಾರನ ಕಾಣದಿನ್ನೆಂತುಳವೆವೆನುತ ॥ ೧೧ ॥ ಜ್ಯೋತಿಲ್ಲದಿರು ಳಿನ ಗೃಹದಂತಿರೆ ಪರಂ । ಜ್ಯೋತಿಯನಗಲಿದ ಈ ತನುಗಳ ॥ ಯಾತಕ್ಕೆ ಸುಡಲೆನುತ ಕಡುನೊಂದು ಲಕ್ಷ್ಮೀ । ನಾಥ ನಮ್ಮಯ ಮನಕೆ ಗೋಚ ರಿಸು ಎನುತ ॥ ೧೨ ॥ ಹಿಮಕರನ ಕಿರಣ ಒಸರುತಿವೆ ಏಕೊ ಅವನ । ಕಮನೀಯ ಪೇರುರವನಾಲಂಗಿಸಿ ॥ ಯಮುನೆ ಮಳಲತಟದಲೊಪ್ಪುವ ಕೃಷ್ಣನ । ರಮಿಸುವಾನಂದ ಸುಖವೆಂತಪ್ಪುದೆನುತ ॥ ೧೩ ॥ ಮಧುರೆ ಯಲಿ ಬಿಲ್ಲಹಬ್ಬ ಪುಟ್ಟಿಸಿ ಕುಟಿ । ಲದಲಿ ಎಮ್ಮ ಪ್ರಾಣಪತಿಯ ಕರೆಸಿದ ॥ ಸುದತಿಯರ ಮನದಳಲು ತಟ್ಟದಿಹುದೆ ನಮ್ಮ । ಎದೆಗಿಚ್ಚು ಕಂಸನ

ತಲೆಗೆ ಮೂಡಲಿ ಎನುತ ॥ ೧೪ ॥ ಈ ಪರಿ ಹಂಬಲಿಸುವ ನಮ್ಮನಿತಿದ। ಯಾಪರ ಮೂರ್ತಿ ಉದ್ಧವನ ಕಳುಹಿಸಿ ॥ ರೂಪಿಸಿದ ಕುರುಹಿಂದಲೆಮ್ಮ ಪೊರೆವಭಿನವ। ಪುರಂದರವಿಠಲನೆಂದಿಗು ಬಿಡನೆನುತ ॥ ೧೫ ॥ ಶ್ರೀಃ ॥

## ೧೧೦. ರಾಗ ಪಂತುವರಾಳಿ, ಏಕತಾಳ.

ಬೂಚಿ ಬಂದಿದೆ। ರಂಗ। ಬೂಚಿ ಬಂದಿದೆ ॥ ಪಲ್ಲ ॥ ಚಾಚಿ ಕುಡಿದು ಸುಮ್ಮನೆ ನೀ। ಪಾಚಿಕೊಳ್ಳೊ ಕೃಷ್ಣಯ್ಯ ॥ ಅನುಪಲ್ಲ ॥ ನಾಲ್ಕು ಮುಖದ ಬೂಚಿಯೊಂದು । ಗೋಕುಲಕ್ಕೆ ಓಡಿಬಂದು ॥ ಲೋಕರನ್ನು ಎಳೆದು ಕೊಂಡು। ಶಾಕುಮಾಡಿ ಒಯ್ಯುವುದಕೆ ॥ ೧ ॥ ಮೂರು ಕಣ್ಣಿನ ಬೂಚಿ ಯೊಂದು। ಊರೂರ ಸುತ್ತಿಬಂದು ॥ ದ್ವಾರದಲ್ಲಿ ನಿಂದಿದೆ ನೋಡೊ। ಪೋರರನ್ನು ಒಯ್ಯುವುದಕೆ ॥ ೨ ॥ ಅಂಗವೆಲ್ಲ ಕಂಗಳುಳ್ಳ। ಶೃಂಗಾರ ಮುಖದ ಬೂಚಿ ॥ ಬಂಗಾರದಂಥ ಮಕ್ಕಳನೆಲ್ಲ। ಕಂಗೆಡಿಸಿ ಒಯ್ಯುವು ದಕೆ ॥ ೩ ॥ ಆರು ಮುಖದ ಬೂಚಿಯೊಂದು। ಈರಾರು ಕಂಗಳದಕೆ ॥ ವಾರು ವಾರು ಅಳುವ ಮಕ್ಕಳ। ದೂರ ಸೆಳೆದು ಒಯ್ಯುವುದಕ್ಕೆ ॥ ೪ ॥ ಮರದ ಮೇಲೆ ಇರುವುದೊಂದು। ಕರಾಳಮುಖದ ಬೂಚಿ ॥ ತರಳರನ್ನು ಎಳೆದುಕೊಂಡು। ಪುರಂದರವಿಠಲಗೊಪ್ಪಿಸಲಿಕ್ಕೆ ॥ ೫ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೧೧. ರಾಗ ಮಧ್ಯಮಾವತಿ, ಆದಿತಾಳ.

ಮರುಳುಮಾಡಿಕೊಂಡೆಯಲ್ಲೆ ಮಾಯಾದೇವಿಯೆ ॥ ಪಲ್ಲ ॥ ಇರುಳು ಹಗಲೂ ಏಕವಾಗಿ ಹರಿಯು ನಿನ್ನ ಬಿಡದಿಪ್ಪಂತೆ ॥ ಅನುಪಲ್ಲ ॥ ಜ್ಞಾನಿ ಗಳು ನಿತ್ಯ ಅನ್ನ ಪಾನಾದಿಗಳನ್ನು ಬಿಟ್ಟು । ನಾನಾ ವಿಧ ತಪವಿದ್ದರು ಧ್ಯಾನಕ್ಕೆ ಸಿಲುಕದವನ ॥ ೧ ॥ ಸರ್ವ ಸಂಗವನ್ನು ಬಿಟ್ಟು ಸನ್ಯಾಸಿಯಾದ ಕಾಲಕ್ಕು । ಸರ್ವದ ತನ್ನೆದೆಯ ಮೇಲೆ ಬಿಡದೆ ಧರಿಸಿಪ್ಪಂತೆ ॥ ೨ ॥ ಪ್ರಳಯಕಾಲದಲ್ಲಿ ಆಲದೆಲೆಯ ಮೇಲೆ ಮಲಗಿದ್ದಾಗ । ಹಲವು ಆಭರ ಣಂಗಳು ಜಲವು ಆಗಿ ಜಾಣತನದಿ ॥ ೩ ॥ ರಂಗನು ಭೂಲೋಕದಿ

ಭುಜಂಗ ಗಿರಿಯೊಳಲವೇಲು । ಮಂಗ ಪತಿಯಾಗಿ ನಿನ್ನ ಅಂಗೀಕರಿಸು ವಂತೆ ॥ ೪ ॥ ಮಕ್ಕಳ ಪಡೆದರೆ ನಿನ್ನ ಚೊಕ್ಕತನವು ಪೋಪುದೆಂದು । ಪೊಕ್ಕುಳೊಳು ಮಕ್ಕಳ ಪಡೆದು ಕಕ್ಕುಲಾತಿ ಪಡುವಂತೆ ॥ ೫ ॥ ಎಡಕೆ ಭೂಮಿ ಬಲಕೆ ಶ್ರೀಯು ಎದುರಲ್ಲಿ ದುರ್ಗಾದೇವಿ । ತೊಡೆಯ ಮೇಲೆ ಲಕುಮಿಯಾಗಿ ಬಿಡದೆ ಮುದ್ದಾಡಿಸುವಂತೆ ॥ ೬ ॥ ಎಂದೆಂದಿಗೂ ಮರೆಯ ನಿನ್ನಾನಂದದಿ ಜನರಿಗೆಲ್ಲ । ತಂದು ತೋರಿ ಸ್ವಾಧೀನ ಪುರಂದರವಿಠಲ ರಾಯನ ॥ ೭ ॥ ಶ್ರೀಃ ॥

## ೧೧೨. ರಾಗ ತೋಡಿ (ಕಾಂಬೋಧಿ), ಅಟತಾಳ.

ಒಂದೆ ಮನದಲಿ ಭಜಿಸು ವಾಗ್ದೇವಿಯ । ಇಂದು ಮತಿಕೊಡುವಳು ಶ್ರೀಹರಿಯ ಧ್ಯಾನದೊಳು ॥ ಪಲ್ಲ ॥ ಹಿಂದೆ ಪ್ರಹ್ಲಾದನು ಕಮಲಜನ ಸತಿಗೆರಗಿ । ಬಂದು ಆರಂಭಿಸಲು ಹರಿ ವಿಶ್ವಮಯನೆಂದು ॥ ಬಂದ ವಿಘ್ನವ ಕಳೆದು ಭಾವಶುದ್ಧಿಯನಿತ್ತು । ಹೊಂದಿಸಿದಳಾ ಶ್ರೀಹರಿಯ ಚರಣವನು ॥ ೧ ॥ ಅಂದು ದಶಮುಖನನುಜ ವಂದಿಸದೆ ವಾಣಿಯನು । ಬಂದು ತಪವನು ಗಯ್ಯೆ ಬಹು ಕಾಲಕೆ ॥ ಅಂದದಿಂದಜ ಮೆಚ್ಚಿ ವರ ವಧಿಕ ಬೇಡೆನಲು । ಬಂದು ಜಿಹ್ವೆಯಲಿ ನಿದ್ರೆಯನು ಬೇಡಿಸಿದಳು ॥ ೨ ॥ ಅರಿತು ಭಜಿಸಲು ಬಿಡದೆ ಅಜನರಸಿಯ ನಿತ್ಯ । ಉರುತರವಾದ ವಾಗ್ಬುದ್ಧಿಯನಿತ್ತು ॥ ನಿರುತ ಪುರಂದರವಿಠಲನ ಸೇವೆಯೊಳು । ಪರತತ್ವ ಕಥಾಮೃತವನುಣಿಸುವಳು ॥ ೩ ॥ ಶ್ರೀಃ ॥

## ೧೧೩. ರಾಗ ಶಂಕರಾಭರಣ, ಅಟತಾಳ.

ಮಂಗಸೆಂದಾಡಿಸುವಳು ಜಗದುದರನ್ನ । ಆನಂದದಿ ಗೋಪಿ ॥ ಪಲ್ಲ ॥ ಕುಕ್ಷಿಯೊಳೀರೇಳು ಜಗವನೆಲ್ಲವ ತಾಳಿ । ರಕ್ಷಿಸಿಕೊಂಡಿಹ ಬಲವಂತನ ॥ ಪಕ್ಷಿವಾಹನ ದೇವ ಅಂಜಿದಂಜಿದ ಯೆಂದು । ರಕ್ಷೆಯಿಡುವ ಪುಣ್ಯವೆಲ್ಲಿ ಪಡೆದಳೊ ॥ ೧ ॥ ಸಾಗರಪತಿಯಾಗಿ ಭೋಗಿಶಯನದಲಿ । ಯೋಗ ನಿದ್ರೆಯೊಳಿಪ್ಪ ಆ ಕಂದನ ॥ ಆಗಮ ಶ್ರುತಿಗಳು ಅರಸಿ ಕಾಣದ ವಸ್ತು । ತೂಗಿ ನೋಡುವ ಪುಣ್ಯವೆಲ್ಲಿ ಪಡೆದಳೋ ॥ ೨ ॥ ವೇದ ತತಿಗಳಿಂದ

ಬೋಧ ತಪಗಳಿಂದ । ಹೋದ ಹೊಲಬನರಿಯದಾತನ ॥ ಬೀದಿಯಲಾಡುವ ಮಗನನರಸಿ ಏ । ನೋದವಾಡುವ ಪುಣ್ಯವೆಲ್ಲಿ ಪಡೆದಳೊ ॥ ೩ ॥ ಹೊನ್ನಮಣೆಯ ಮೇಲೆ ಚಿಣ್ಣನ ಕುಳ್ಳಿರಿಸಿ । ಎನ್ನ ಮೋಹದ ಮುದ್ದು ಮಗನೆನುತ ॥ ಹೊನ್ನ ತಾ ಗುಬ್ಬಿ ತಾ ಹೊನ್ನ ಗುಬ್ಬಿಯೆಂದು । ಚಿಣ್ಣನಾಡಿಪ ಪುಣ್ಯವೆಲ್ಲಿ ಪಡೆದಳೊ ॥ ೪ ॥ ಬಲಿಯಿತ್ತ ಧಾರೆಯ ಜಲವ ಕರದೊಳಿಟ್ಟು । ನೆಲನ ಈರಡಿ ಮಾಡಿದ ದೇವನ ॥ ಲಲನೆ ತೊಡೆಯೊಳಿಟ್ಟು ತಲೆಯ ನೇವರಿಸುತ್ತ । ಮೊಲೆಯ ಕೊಡುವ ಪುಣ್ಯವೆಲ್ಲಿ ಪಡೆದಳೋ ॥ ಮಡದಿ ಬಾಲಕನ ನಿಲ್ಲೊ ನಿಲ್ಲೋ ಎಂದು । ಬಿಡದೆ ಕೊನೆಬೆರಳಲ್ಲಿ ಕರ ಪಿಡಿದು ॥ ಅಡಿಯಿಡು ಮಗನೆ ದಟ್ಟಡಿಯಿಡು ಇಡು ಎಂದು । ನಡೆಯ ಕಲಿಸುವ ಪುಣ್ಯವೆಲ್ಲಿ ಪಡೆದಳೊ ॥ ೬ ॥ ಒಣಗಿದ ತನು ತಲೆಜಡೆ ಹಣೆಯಲಿ ನಾಮ । ಪ್ರಣವ ಜಪದಿ ಮಣಿಮಾಲೆಯನೆಣಿಸಿ ॥ ಮುನಿಜನಗಳಿಂದು ಅರಸಿ ಕಾಣದವನೊಳ್ । ಅಣಕವಾಡುವ ಪುಣ್ಯವೆಲ್ಲಿ ಪಡೆದಳೊ ॥ ೭ ॥ ಪಶುಪತಿ ಬ್ರಹ್ಮರು ಸುರಸಿದ್ಧ ಸಾಧ್ಯರು । ವಸುಧೆಯೊಳಗೆ ಬಂದು ಕಾದಿರಲು ॥ ಶಶಿಮುಖಿ ಸಾಸಿರ ಪೆಸರುಳ್ಳ ದೇವನ । ಪೆಸರಿಡುವ ಪುಣ್ಯವೆಲ್ಲ ಪಡೆದಳೊ ॥ ೮ ॥ ಮಂದಗಮನೆ ಆನಂದದಿ ನಿಟ್ಟಿಸಿ । ಕುಂದದೆ ಜಯ ಜಯವೆನುತಿರಲು ॥ ಮಂದರಧರ ಪುರಂದರವಿಠಲನ । ಬಂದಪ್ಪುವ ಪುಣ್ಯವೆಲ್ಲಿ ಪಡೆದಳೊ ॥ ೯ ॥ ಶ್ರೀಃ ॥

## ೧೧೪. ರಾಗ ಸೌರಾಷ್ಟ್ರ, ಆದಿತಾಳ.

ಶೋಭನವೇ ಇದು ಶೋಭನವೆ ॥ ಪಲ್ಲ ॥ ವೈಭವವೇ ನಮ್ಮ ವಾಮನಮೂರ್ತಿಗೆ ॥ ಅನುಪಲ್ಲ ॥ ಪಾಲಗಡಲು ಮನೆಯಾಗಿರಲೂ । ಆಲದೆಲೆಯ ಮೇಲೆ ಮಲಗುವರೆ ॥ ಮೂಲೋಕವ ನಿನ್ನುದರದೊಳಿಂಬಿಟ್ಟು ಮುದ್ದು । ಬಾಲಕನಾಗಿ ಎತ್ತಿಸಿಕೊಂಬರೆ ॥ ೧ ॥ ಸಿರಿ ನಿನ್ನ ಕೈವಶವಾಗಿರಲೂ । ತಿರಿವರೆ ಬಲಿಯ ದಾನವ ಬೇಡಿ ॥ ಸರಸಿಜಭವ ನಿಮ್ಮ ಪೂಜೆ ಮಾಡುತಲಿರೆ । ನರನ ಬಂಡಿಯ ಬೋವನಾಗುವರೆ ॥ ೨ ॥ ಕಮ್ಮಗೋಲನ ಪಿತನಾಗಿರಲೂ । ಸುಮ್ಮನೆ ಕುಬುಜೆಗೆ ಸೋಲುವರೆ ॥ ಬೊಮ್ಮ

ಮೂರುತಿ ನಿನಗೆಣೆಯುಂಟೆ ತ್ರಿಜಗದಿ । ಹಮ್ಮಿನ ದೇವ ಪುರಂದರ ವಿಠಲ ॥ ೩ ॥ ಶ್ರೀಃ ॥

ರಾರ. ರಾಗ ಆರಭಿ, ಆದಿತಾಳ.

ಲಾಲಿಸಿದಳು ಮಗನ । ಯಶೋದೆ । ಲಾಲಿಸಿದಳು ಮಗನ ॥ ಪಲ್ಲ ॥ ಆರಳೆಲೆ ಮಾಗಾಯಿ ಬೆರಳಿಗುಂಗುರವಿಟ್ಟು । ತರಳನ ಮೈಸಿರಿ ತರುಣಿ ನೋಡುತ ಹಿಗ್ಗಿ ॥ ೧ ॥ ಬಾಲಕನೆ ಕೆನೆಹಾಲು ಮೊಸರನೀವೆ । ಲೀಲೆ ಯಿಂದಲಿ ಎನ್ನ ತೋಳ ಮೇಲ್ಮಲಗೆಂದು ॥ ೨ ॥ ಮುಗುಳು ನಗೆಯಿಂದ ಮುದ್ದು ತಾ ತಾರೆಂದು । ಜಗದೊಡೆಯನ ಶ್ರೀಪುರಂದರವಿಠಲನ ॥ ೩ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೧೧೬. ರಾಗ ಪೀಲು, ಆದಿತಾಳ.

ಹರಿ ಕುಣಿದ ನಮ್ಮ ಹರಿ ಕುಣಿದ ॥ ಪಲ್ಲ ॥ ಅಕಳಂಕಚರಿತ ಮಕರ ಕುಂಡಲಧರ । ಸಕಲರ ಪಾಲಿಪ ಹರಿ ಕುಣಿದ ॥ ೧ ॥ ಅರಳೆಲೆ ಮಾಗಾಯಿ ಕೊರಳ ಮುತ್ತಿನ ಸರ । ತರಳೇರ ಒಡಗೂಡಿ ಹರಿ ಕುಣಿದ ॥ ೨ ॥ ಅಂದಿಗೆ ಪಾಗಡ (ಪಾಡಗ) ಬಿಂದಲಿ ಬಾಪುರಿ । ಚಂಪದಿ ನಲಿವುತ್ತ ಹರಿ ಕುಣಿದ ॥ ೩ ॥ ಉಟ್ಟ ಪಟ್ಟೆ ದಟ್ಟಿ ಇಟ್ಟ ಕಾಂಚಿಧಾಮ । ದಿಟ್ಟ ಮಲ್ಲರ ಗಂಡ ಹರಿ ಕುಣಿದ ॥ ೪ ॥ ಪರಮ ಭಾಗವತರ ಪುರದೋಳಾಡುವ । ಪುರಂದರವಿಟ್ಠಲ ಹರಿ ಕುಣಿದ ॥ ೫ ॥ ಶ್ರೀಃ ॥

೧೧೭. ರಾಗ ನಾದನಾಮಕ್ರಿಯೆ, ಝಾಪುತಾಳ.

ಅನುಭವದಡುಗೆಯ ಮಾಡಿ । ಅದ । ಕ್ಕನುಭವಿಗಳು ಬಂದು ನೀವೆಲ್ಲ ಕೂಡಿ ॥ ಪಲ್ಲ ॥ ತನುವೆಂಬ ಭಾಂಡವ ತೊಳೆದು । ಕೆಟ್ಟ । ಮನದ ಚಂಚಲವೆಂಬ ಮುಸುರೆಯ ಕಳೆದು ॥ ಘನವಾಗಿ ಮನೆಯನ್ನು ಬಳಿದು । ಅಲ್ಲಿ । ಮಿನುಗುವ ತ್ರಿಗುಣದ ಒಲೆ ಗುಂಡ ನೆಡೆದು ॥ ೧ ॥ ವಿರಕ್ತಿಯೆಂಬುವ ಮಡಿಯುಟ್ಟು । ಪೂರ್ಣ । ಹರಿಭಕ್ತಿಯೆಂಬ ಸೀರನ್ನೆಸರಿಟ್ಟು ॥ ಅರಿವೆಂಬ ಬೆಂಕಿಯ ಕೊಟ್ಟು । ಮಾಯಾ । ಮರೆವೆಂಬ ಕಾಷ್ಠವ

ಮುದದಿಂದ ಸುಟ್ಟು ॥ ೨ ॥ ಕರುಣೆಂಬೊ ಸಾಮಗ್ರಿ ಹೂಡಿ । ಮೋಕ್ಷ । ಪರಿಕರವಾದಂಥ ಪಾಕವ ಮಾಡಿ ॥ ಗುರು ಶರಣರು ಸವಿದಾಡಿ । ನಮ್ಮ । ಪುರಂದರವಿಠಲನ ಬಿಡದೆ ಕೊಂಡಾಡಿ ॥ ೩ ॥ ಶ್ರೀಃ ॥

## ೧೧೮. ರಾಗ ಸುರುಟಿ, ಆದಿತಾಳ.

ವಾಸಕೆ ಯೋಗ್ಯವಲ್ಲ । ಗೋಕುಲವಿನ್ನು । ಬೇಸರವಾಯಿತಲ್ಲ ॥ ॥ ಪಲ್ಲ ॥ ದೋಷರಹಿತ ಸೋಳಸಾಸಿರ ಹೆಂಗಳ । ಶೇಷಶಯನ ಕೃಷ್ಣ ಮೋಸಮಾಡಿದ ಮೇಲೆ ॥ ಅನುಪಲ್ಲ ॥ ರಂಗ ಮಧುರೆಗೆಂದು । ಅಕ್ರೂರನ । ಸಂಗಡ ಪೋದನಂತೆ ॥ ಅಂಗಜನಯ್ಯನ ಸಂಗವಿಲ್ಲದ ಮೇಲೆ । ಹೆಂಗಳ ಜನ್ಮವಿನ್ನೇತಕೆ ಸುಡಲಿ ॥ ೧ ॥ ನಳಿನಾಕ್ಷ ಮಧುರೆಗೆಂದು । ಪೋಗುವಂಥ । ಸುಳಿವು ತಿಳಿಯಲಿಲ್ಲವು ॥ ಅಳಿಗಿಳಿ ಕೋಗಿಲೆಗಳ ರವವನು ಕೇಳಿ । ಘಳಿಗೆ ಕಳೆವುದೊಂದು ಯುಗವಾದ ಬಳಿಕಿನ್ನು ॥ ೨ ॥ ಪತಿಸುತರನ್ನು ಬಿಟ್ಟು । ಶ್ರೀಪತಿ ನೀನೆ । ಗತಿಯೆಂದು ನಂಬಿರಲು ॥ ಮತಿವಂತಕ್ರೂರನ ಜೊತೆಯೊಳು ಶ್ರೀಹರಿ । ರಥವೇರಿ ತಾನು ಮಧುರೆಗೆ ಪೋದ ಮೇಲೆ ॥ ೩ ॥ ಮಡದಿಯರಂತೆ ನಾವು । ಒಡೆಯನೆಂದು । ವೃಥದಿ ನಂಬಿದ್ದೆವಮ್ಮ ॥ ಕಡುಚೆಲ್ವ ಕೃಷ್ಣನು ನಡುನೀರಿಲಿ ಕೈಯ । ಪಿಡಿಯದೆ ಬಿಟ್ಟು ತಾ ಕಡೆಗೆ ಸಾರಿದ ಮೇಲೆ ॥ ೪ ॥ ಅಚ್ಯುತಾನಂತನನ್ನು । ನಮ್ಮವನೆಂದು । ನೆಚ್ಚಿಕೊಂಡಿದ್ದೆವಮ್ಮ ॥ ಮೆಚ್ಚಿದ ಬಾಲೆಯರಿಗ್ಹುಚ್ಚು ಹಿಡಿಸಿ ಕ್ರೂರ । ಹೆಚ್ಚಿದ ಮಾತನು ಕೊಚ್ಚಿ ಪೋದ ಮೇಲೆ ॥ ೫ ॥ ಮುರಳಿ ನಾದವ ಕೇಳಿ । ತರಳಾಕ್ಷಿಯರು । ಮರುಳಾಗಿ ಬರುತಿದ್ದೆವೆ ॥ ದುರುಳ ಮನ್ಮಥನ ಪೂಸರಳಿಗೆ ಒಪ್ಪಿಸಿ । ಇರುಳೇ ಮಧುರೆಗೆ ತೆರಳಿ ಪೋದ ಮೇಲೆ ॥ ೬ ॥ ಸುರತಸುಖಗಳೆಂಬ । ಶರಧಿಯೊಳು । ಹರುಷಪಡುತಲಿದ್ದೆವೆ ॥ ನಿರುತ ಅವನ ಗುಣ ಚರಿತೆಯ ತೋರದೆ । ತ್ವರಿತದಿ ನಮ್ಮನು ತೊರೆದು ಪೋದ ಮೇಲೆ ॥ ೭ ॥ ಕಂತುಪಿತನ ಕಾಣದೆ । ಈ ಪ್ರಾಣವು । ಎಂತು ನಿಲ್ಲುವದಮ್ಮ ॥ ಅಂತರಂಗದ ಕಾಮ ಶಾಂತಮಾಡದೆ ಪೋದ । ಕಾಂತನ ಕಾಣದೆ ಭ್ರಾಂತರಾದ ಮೇಲೆ ॥ ೮ ॥ ಇಂದಿರಾಪತಿ ನಮ್ಮ ।

ಮಂದಿರದೊಳು । ಬಂದು ಪೋಗುತಲಿರಲು ॥ ಸಂದೇಹದಿ ಇವನ ಹೊಂದಿದರಿವರೆಂದು । ಮಂದಿಯೊಳಗೆ ಅಪನಿಂದೆ ಪೊತ್ತೆವಮ್ಮ ॥ ೯ ॥ ಜಾರೆಯರಾದರೆಂದು । ನಮ್ಮವರೆಲ್ಲ । ಸಾರಿ ಕೈಬಿಟ್ಟರಮ್ಮ ॥ ವಾರಿಜಾಕ್ಷನು ಬರಿ ದೂರಿಗೆ ಗುರಿಮಾಡಿ । ದಾರಿ ತೋರದೆ ಪೋದನಾರ ಸೇರುವೆವಮ್ಮ ॥ ॥ ೧೦ ॥ ಬೆರೆವುದಿನ್ನೆಂತು ನಾವು । ಶ್ರೀಹರಿ ಸಂಗ । ದೊರೆವುದಿನ್ನೆಂದಿಗಮ್ಮ ॥ ಕರುಣಾಕರ ನಮ್ಮ ಪುರಂದರವಿಠಲನು । ಕರೆದುಕೊಳ್ಳದೆ ನಮ್ಮ ತೊರೆದು ಪೋದ ಮೇಲೆ ॥ ೧೧ ॥ ಶ್ರೀಃ ॥

## ೧೧೯. ರಾಗ ಧನ್ಯಾಸಿ, ಆದಿತಾಳ.

ಯಶೋದೆ ನಿನ್ನ ಕಂದಗೆ ಏಸು ರೂಪವೆ ॥ ಪಲ್ಲ ॥ ಶಿಶುವಲ್ಲ ನಿನ್ನ ಮಗ ಕೃಷ್ಣ ಜಗತ್ಪತಿಯೆ ॥ ಅನುಪಲ್ಲ ॥ ಹಸುಗಳ ಕರೆವಲ್ಲಿ ಹಲವು ರೂಪ ತೋರುವ । ಬಿಸಿಯ ಹಾಲಿಡುವಲ್ಲಿ ಬೆನ್ನ ಹಿಂದೆ ಇರುವ ॥ ಮೊಸರ ಕಡೆಯುವಲ್ಲಿ ಮುಂದೆ ತಾ ನಿಂದಿರುವ । ಹಸನಾಗಿ ಮೋಸ ಮಾಡಿ ಬೆಣ್ಣೆಯ ಮೆಲುವ ॥ ೧ ॥ ಒಬ್ಬರ ಮನೆಯಲ್ಲಿ ಮಲಗಿ ತಾನಿರುವ । ಒಬ್ಬರ ಮನೆಯಲ್ಲಿ ಬೆಣ್ಣೆ ಕದ್ದು ಮೆಲುವ ॥ ಒಬ್ಬರ ಮನೆಯಲಿ ರತಿಕ್ರೀಡೆಯಾಡುತಿರುವ । ಒಬ್ಬರ ಮನೆಯಲಿ ಪುಟ ಚಂಡನಾಡುವ ॥ ॥ ೨ ॥ ಹಿಂದೆ ತಾ ನಿಂದಿರುವ ಮುಂದೆ ಹೋಗುತ್ತಿರುವ । ಇಂದುಮುಖಿಯರ ಕೂಡೆ ಸರಸವಾಡುವ ॥ ಬಂದು ನೋಡೆ ಯಶೋದೆ ಬಣ್ಣದ ಮಾತಲ್ಲ । ನಂದಗೋಪನ ಕಂದ ಪುರಂದರವಿಠಲ ॥ ೩ ॥ ಶ್ರೀಃ ॥

## ೧೨೦. ರಾಗ ತೋಡಿ, ಆದಿತಾಳ.

ಗುಮ್ಮನೆಲ್ಲಿಹ ತೋರಮ್ಮಾ । ಸುಮ್ಮನಂಜಿಸಬೇಡಮ್ಮಾ ॥ ಪಲ್ಲ ॥ ಪಂಚಾಶತ್ಕೋಟಿ ವಿಸ್ತೀರ್ಣದ ಭೂಮಿಯ । ವಂಚನೆಯಿಲ್ಲದೆ ತಿರುಗಿ ಬಂದೆನೆ ನಾನು ॥ ಹಂಚಿಸಿ ಕೊಟ್ಟೆನೆ ಅವರವರಿಗೆ ನಾ । ಹಾಂಗು ನೋಡಿದರು ಕಾಣೆನೆ ಗುಮ್ಮನ ॥ ಅನುಪಲ್ಲ ॥ ಸಿಂಧುವಿನೊಳಗೆ ಆನಂದದಿ ಮಲಗಿದ್ದೆ । ಒಂದು ನಾಭಿಕಮಲದಿ ಬೊಮ್ಮನ ಪುಟ್ಟಿಸಿದೆ ॥ ಅಂಧಕಾರದಿ

ಪೋಗಿ ಒಬ್ಬನೆ ಮಲಗಿದೆ। ಹಾಂಗು ನೋಡಿದರು ಕಾಣೆನೆ ಗುವ್ಮನ ॥ ೧ ॥ ಈರೇಳು ಲೋಕವ ಉದರದೊಳಗೆ ಇಟ್ಟು । ತೋರಿದೆ ಬ್ರಹ್ಮಾಂಡವ ಬಾಯಲಿ ನಾನು ॥ ಘೋರ ರೂಪದಿ ಬಂದ ಗಾಳಿ ಅಸುರನ ಕೊಂದೆ। ಹಾಂಗು ನೋಡಿದರು ಕಾಣೆನೆ ಗುವ್ಮನ ॥ ೨ ॥ ಕಾಳಿಯ ಮಡು ಧುಮುಕಿ ಕಾಳಿಂಗನ್ಹೆಡೆ ತುಳಿದು। ಮೇಲೆ ನಾನಾ ವಿಧ ನಾಟ್ಯವಾಡುತಲಿದ್ದೆ॥ ಒಲಿದು ಭಾಗ್ಯವನಿತ್ತೆ ನಾಗಪತ್ನಿಯರಿಗೆ। ಹಾಂಗು ನೋಡಿದರು ಕಾಣೆನೆ ಗುವ್ಮನ ॥ ೩ ॥ ಅಕ್ರೂರಗೆ ವಿಶ್ವರೂಪವ ತೋರಿದೆ। ಥಕ್ಕನೆ ರಥವೇರಿ ಮಧುರೆಗೆ ಪೋದೆ ॥ ಸೊಕ್ಕಿದ ರಜಕನ ಕೊಂದು ಮಡಿಯನುಟ್ಟೆ । ಹಾಂಗು ನೋಡಿದರು ಕಾಣೆನೆ ಗುವ್ಮನ ॥ ೪ ॥ ಬಿಲ್ಲಹಬ್ಬಕೆ ಪೋಗಿ ಮಲ್ಲರ ಮಡುಹಿದೆ। ಅಲ್ಲಿ ಮಾವನ ಕೊಂದು ಮುತ್ಯಗೆ ಪಲಿದೆ॥ ಚೆಲ್ವ ಗೋಪಾಲ ಶ್ರೀಪುರಂದರವಿಠಲನ । ಬಾರಿಬಾರಿಗೆ ನೀ ಬೆದರಿಸಬೇಡಮ್ಮ॥ ೫ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೨೧. ರಾಗ ಜಂಜೂಟಿ, ಛಾಪುತಾಳ.

ಯಾರ ಮಗನಮ್ಮ ರಂಗಯ್ಯ ॥ ಪಲ್ಲ ॥ ಯಾರ ಮಗನಮ್ಮ ದಾರಿಯ ಕಟ್ಟುವ । ಯಾರಿಗೂ ಇವನ ದಾರಿಯು ತಿಳಿಯದೆ॥ ೧ ॥ ಕಾಂತೆ ಕೇಳು ಏಕಾಂತದಿ ಮಲಗಿದ್ದೆ। ಕಾಂತನಂತೆ ಏಕಾಂತಕೆ ಕರೆದನೆ ॥ ೨ ॥ ಅರವಿಂದಾನನೆ ಕೇಳು ಅರೆಮೊರೆಯಿಲ್ಲದೆ । ಅರೆಕಟ್ಟೆ ಎನ್ನ ಅಧರ ಮುದ್ದಿಕ್ಕಿದ॥ ೩॥ ಸರಸಿಜಾನನೆ ಕೇಳೆ ಸರಿರಾತ್ರಿ ವೇಳೆಯಲಿ। ಹರುಷದಿಂದಲಿ ಎನ್ನ ಸರಸಕ್ಕೆ ಎಳೆದನೆ ॥ ೪ ॥ ಗಾಡಿಕಾರ ಶ್ರೀಪುರಂದರವಿಠಲ। ಗಾಢಾಲಿಂಗನ ಮಾಡಿ ಓಡಿಪೋದನಮ್ಮ॥ ೫ ॥ ಶ್ರೀಃ ॥

## ೧೨೨. ರಾಗ ಕಾಂಬೋಧಿ, ಝಂಪೆತಾಳ.

ಇಷ್ಟು ಪಾಪವ ಮಾಡಿದ್ದೆ ಸಾಕು ॥ ಪಲ್ಲ ॥ ಸೃಷ್ಟೀಶನೆ ಎನ್ನನುದ್ಧರಿಸಬೇಕು ॥ ಅನುಪಲ್ಲ ॥ ಒಡಲ ಕಿಚ್ಚಿಗೆ ಪರರ ಕಡು ನೋಯಿಸಿದೆ ಕೃಷ್ಣ । ಕೊಡದೆ ಅನ್ಯರ ಋಣವನಪಹರಿಸಿದೆ ॥ ಮಡದಿಯ ನುಡಿಗೇಳಿ ಒಡ

ಹುಟ್ಟಿದವರೊಡನೆ । ಹಡೆದ ತಾಯಿಯು ಕೂಡೆ ಹಗೆ ಮಾಡಿದೆ ॥ ೧ ॥ ಸ್ನಾನಸಂಧ್ಯಾದಿಗಳ ಮಾಡದಲೆ ವ್ಯೈಗೆಟ್ಟೆ । ಜ್ಞಾನಮಾರ್ಗವನಂತು ಮೊದಲೆ ಬಿಟ್ಟೆ ॥ ಏನ ಪೇಳಲಿ ಪರರ ಮಾನಿನಿಗೆ ಮನಸಿಟ್ಟೆ । ಶ್ವಾನ ಸೂಕರನಂತೆ ಹೊರೆದೆ ಹೊಟ್ಟೆ ॥ ೨ ॥ ವ್ರತ ನೇಮ ಉಪವಾಸ ಒಂದು ದಿನ ಮಾಡಲಿಲ್ಲ । ಅತಿಥಿಗಳಿಗನ್ನವನು ನೀಡಲಿಲ್ಲ ॥ ಶ್ರುತಿ ಶಾಸ್ತ್ರ ಪೌರಾಣ ಕಥೆಗಳನು ಕೇಳಲಿಲ್ಲ । ವೃಥವಾಗಿ ಬಹು ಕಾಲ ಗತವಾಯಿತಲ್ಲ ॥ ೩ ॥ ಶುದ್ಧ ವೈಷ್ಣವ ಕುಲದಲುದ್ಭವಿಸಿದೆ ನಾನು । ಮಧ್ವಮತ ಸಿದ್ಧಾಂತ ಪದ್ಧತಿಗಳ ॥ ಬುದ್ಧಿಪೂರ್ವಕ ತಿಳಿಯದುದ್ದಂಡ ಕಾಯವನು । ವೃದ್ಧಿ ಮಾಡಿದೆನಯ್ಯ ಉದ್ಧರಿಸು ಹರಿಯೆ ॥ ೪ ॥ ತಂದೆತಾಯಿಯ ಸೇವೆಯೊಂದುದಿನ ಮಾಡಲಿಲ್ಲ । ಮಂದಭಾಗ್ಯಗೆ ಭವಣೆ ತಪ್ಪಲಿಲ್ಲ ॥ ಹಿಂದೆ ಮಾಡಿದ ದೋಷ ಒಂದುಳಿಯದರುಹಿದೆನೊ । ತಂದೆ ಪುರಂದರವಿಠಲ ಬಂದೆನ್ನ ಸಲಹೊ ॥ ೫ ॥ ಶ್ರೀಃ ॥

## ೧೨೩. ರಾಗ ಧನ್ಯಾಸಿ, ಆದಿತಾಳ.

ಒಡೆಯ ಹರಿ ಸರ್ವೋತ್ತಮನೆಂಬ । ದೃಢ ಜ್ಞಾನಿಗಳೆ ವೈಷ್ಣವರಲ್ಲದೆ । ಇಂಥ । ತುಡುಗ ಮುಂಡೇಗಂಡರಿಗಿನ್ನು ವೈಷ್ಣವ ಸಲ್ಲುವುದೆ ॥ ಪಲ್ಲ ॥ ಗಡ್ಡ ಮೀಸೆ ಬೋಳಿಸಿಕೊಂಡು ಗೊಡ್ಡು ನಾಮ ತೀಡಿಕೊಂಡು । ಅಡ್ಡಾದಿಡ್ಡಿ ಮುದ್ರೆಗಳ ಬಡಿದುಕೊಂಡಿನ್ನು ॥ ದೊಡ್ಡ ದೊಡ್ಡ ಮಾತುಗಳಾಡಿ ದೊಡ್ಡವರೆಂದ್ಹೇಳಿಕೊಂಬ । ಬಡ್ಡೀಧಗಡೀ ಮಕ್ಕಳಿಗಿನ್ನು ವೈಷ್ಣವ ಸಲ್ಲುವುದೇ ॥ ೧ ॥ ಭಾಗವತರನ್ನೆ ಕಂಡು ಕಂಡ್ಹಾಂಗೆ ನಿಂದೆಮಾಡುತ । ಸೋಗೇಲಿರುವ ಜೋಗೀ ತೊತ್ತಿನ ಮಕ್ಕಳಾದವರು ॥ ಈಗ ನಾವು ಶ್ರೇಷ್ಠರೆಂದು ಹೇಳಿಕೊಂಡು ತಿರುಗುವಂಥ । ಗೂಗೆ ಮೋರೆ ನೀಚರಿಗಿನ್ನು ವೈಷ್ಣವ ಸಲ್ಲುವುದೆ ॥ ೨ ॥ ಗುರು ಮಧ್ವಾಂತರ್ಯಾಮಿಯಾದ ಪುರಂದರವಿಠಲನ ಮಹಿಮೆ । ಸ್ಥಿರವಾಗಿ ನಂಬದೆ ಇರುವ ಗರುವಿನ ಮನುಜರು ॥ ಗುರು ಮಂತ್ರ ಉಪದೇಶ ತಾರತಮ್ಯ ಜ್ಞಾನವಿಲ್ಲದಂಥ । ಪರಮ ಚಾಂಡಾಲರಿಗಿನ್ನು ವೈಷ್ಣವ ಸಲ್ಲುವುದೆ ॥ ೩ ॥ ಶ್ರೀಃ ॥

## ೧೨೪. ರಾಗ ನಾದನಾಮಕ್ರಿಯೆ, ಅಟತಾಳ.

ದುಗ್ಗಾಣಿ ಎಂಬುದು ದುರ್ಜನ ಸಂಗ ॥ ಪಲ್ಲ ॥ ದುಗ್ಗಾಣಿ ಬಲು ಕೆಟ್ಟ ದಣ್ಣ ॥ ಅನುಪಲ್ಲ ॥ ಆಚಾರ ಹೇಳೋದು ದುಗ್ಗಾಣಿ । ಬಹು । ನೀಚರ ಮಾಡೋದು ದುಗ್ಗಾಣಿ ॥ ನಾಚಿಕೆಯಿಲ್ಲದೆ ಮನೆಮನೆ ತಿರುಗಿಸಿ । ಛೀಛೀ ಎನಿಸೋದು ದುಗ್ಗಾಣಿ ಅಣ್ಣ ॥ ೧ ॥ ನಂಟತನ ಹೇಳೋದು ದುಗ್ಗಾಣಿ । ಬಹು । ನಂಟರನೊಲಿಸೋದು ದುಗ್ಗಾಣಿ ॥ ಒಂಟಿ ಹಾಂಗೆ ಮೋರೆ ಮೇಲೆಕ್ಕೆ ಸೆಳಕೊಂಡು । ಕುಂಟನೆನಿಸುವುದು ದುಗ್ಗಾಣಿ ಅಣ್ಣ ॥ ॥ ೨ ॥ ಮಾನವಾಗಿರಿಸೋದು ದುಗ್ಗಾಣಿ । ಮಾನ ಹಸಗೆಡಿಸೋದು ದುಗ್ಗಾಣಿ ॥ ಬಹು । ಮಾನನಿಧಿ ಶ್ರೀಪುರಂದರವಿಠಲನ । ಕಾಣಿಸದಿರುವುದು ದುಗ್ಗಾಣಿ ಅಣ್ಣ ॥ ೩ ॥ ಶ್ರೀಃ ॥

## ೧೨೫. ರಾಗ ಕಮಾಚ್, ಅಟತಾಳ.

ನಂದತನಯ ಗೋವಿಂದನ ಭಜಿಪುದಾನಂದವಾದ ಮಿಠಾಯಿ ॥ ಪಲ್ಲ ॥ ಬಂಧಗಳನು ಭವರೋಗಗಳೆಲ್ಲನು ನಿಂದಿಪುದೀ ಮಿಠಾಯಿ ॥ ಅನುಪಲ್ಲ ॥ ದಧಿ ಘೃತ ಕ್ಷೀರಕ್ಕಿಂತಲು ಇದು ಬಹು ಅಧಿಕವಾದ ಮಿಠಾಯಿ । ಕದಳಿ ದ್ರಾಕ್ಷ ಖರ್ಜೂರ ರಸಗಳನು ಮೀರುವುದೀ ಮಿಠಾಯಿ ॥ ೧ ॥ ಪಂಚ ಭಕ್ಷ್ಯಗಳ ಷಡ್ರಸಾನ್ನಗಳ ಮಿಂಚಿದಂಥ ಮಿಠಾಯಿ । ಕಂಚೀಶನೆ ರಕ್ಷಿಸು ಎಂದುಸುರುವರಂಜಿಕೆ ಬಿಡಿಸು ಮಿಠಾಯಿ ॥ ೨ ॥ ಜಪತಪ ಸಾಧನಗಳಿಗಿಂತಲು ಬಹು ಅಪುರೂಪದ ಮಿಠಾಯಿ । ಜಿಪುಣ ಮತಿಗಳಿಗೆ ಸಾಧ್ಯವಲ್ಲದಿಹ ಪುರಂದರವಿಠಲ ಮಿಠಾಯಿ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೨೬. ಶ್ರೀರಾಗ, ಅಟತಾಳ.

ಪಾಲಿಸೆ ಎನ್ನ ಶ್ರೀಮಹಾಲಕ್ಷ್ಮೀ । ಪಾಲಿಸೆ ಎನ್ನನು ಪಾಲಾಬ್ಧಿ ಸಂಜಾತೆ ॥ ಪಲ್ಲ ॥ ಲಲಿತಾಂಗಿ ಶುಭೆ ದೇವಿ ಮಂಗಳೆ ದೇವಿ ॥ ಅನುಪಲ್ಲ ॥ ವೇದಾಭಿಮಾನಿ । ಸಾರಸಾಕ್ಷಿ । ಶ್ರೀಧರ ರಮಣಿ ॥ ಕಾದುಕೊ ನಿನ್ನಯ

ಪಾದಸೇವಕರನ್ನು । ಆದಿಶಕ್ತಿ ಸರ್ವಾಧಾರೆ ಗುಣಪೂರ್ಣೆ ॥ ೧ ॥ ದಯದಿಂದ ನೋಡೆ । ಭಜಿಪ ಭಕ್ತ । ಭಯ ದೂರ ಮಾಡೆ ॥ ದಯಪಾಲಿಸೆ ಮಾತೆ ತ್ರೈಲೋಕ್ಯವಿಖ್ಯಾತೆ । ಜಯದೇವಿ ಸುವ್ರತೆ ಹಯವದನನ ಪ್ರೀತೆ ॥ ॥ ೨ ॥ ನೀನಲ್ಲದನ್ಯ । ರಕ್ಷಿಪರನು । ಕಾಣೆ ನಾ ಮುನ್ನ ॥ ದಾನವಾಂತಕ ಸಿರಿ ಪುರಂದರವಿಠಲನ । ಧ್ಯಾನಿಪ ಭಕುತರ ಮಾನ ನಿನ್ನದು ತಾಯೆ ॥ ೩ ॥

## ೧೨೭. ರಾಗ ಕಾಂಬೋಧಿ, ಝಂಪೆತಾಳ.

ಯಾರೆತ್ತ ಪೋದರೇನು ಊರೆತ್ತ ಬೆಂದರೇನು । ಪೂರ್ವ ಪ್ರಾಪ್ತಿ ತನಗಲ್ಲದುಂಟೆ ಮನವೆ ॥ ಪಲ್ಲ ॥ ಹಗಲೆ ತಾರಕೆಗಳು ಹಾರಿ ಆಡಿದರೇನು । ಬೈಗು (ಇರುಳೆ) ಭಾಸ್ಕರ ಮೂಡಿ ಬೆಳಗಾದರೇನು ॥ ಹಗೆಯವರ ಮನೆಯಲ್ಲಿ ಹಗರಣಾದರೆ ಏನು । ನಿಗಮಗೋಚರನಂಘ್ರಿ ನೆನೆ ಕಂಡ್ಯ ಮನವೆ ॥ ೧ ॥ ಬೆಂಡು ಮುಳುಗಿದರೇನು ಗುಂಡು ತೇಲಿದರೇನು । ಭಂಡ ನಾಲಿಗೆ ಎರಡು ತುಂಡಾದರೇನು ॥ ಉಂಡ ಮನೆಗೆರಡೆಣಿಪ ನುರಿದು ಬಿದ್ದರೆ ಏನು । ಪುಂಡರಿಕಾಕ್ಷನ್ನ ನೆನೆ ಕಂಡ್ಯ ಮನವೆ ॥ ೨ ॥ ವೆಚ್ಚಕಿಲ್ಲದ ಹಣವು ವ್ಯರ್ಥವಾದರೆ ಏನು । ಮುಚ್ಚರಿಸುವರೆಲ್ಲ ಮಡಿದರೇನು ॥ ಅಚ್ಯುತಾನಂತ ಶ್ರೀಪುರಂದರವಿಟ್ಠಲನ । ನಿಶ್ಚಲ ಭಕುತಿಯಿಂದ ನೆನೆ ಕಂಡ್ಯ ಮನವೆ ॥ ೩ ॥ ಶ್ರೀಃ ॥

## ೧೨೮. ರಾಗ ಆನಂದಭೈರವಿ, ಛಾಪುತಾಳ.

ಹೊರಗ್ಹೋಗಿ ಆಡದಿರ್ಹರಿಯೆ ಎನ್ನ ಧೊರೆಯೇ । ನೆರೆ । ಹೊರೆಯವರು ಕಂಡರೆ ದೂರುವುದರಿಯೆ ॥ ಪಲ್ಲ ॥ ಮನೆಯೊಳಗಾಡೊದೆ ಚೆಂದ । ನೆರೆ । ಮನೆಗಳಿಗೆಲ್ಲ ಪೋಗುವರೆ ಮುಕುಂದ । ಮಾನಿನಿಯರು ಮೋಹದಿಂದ । ನಿನ್ನ । ಮನವನಪಹರಿಸಿಕೊಂಬುವರೊ ಗೋವಿಂದ ॥ ೧ ॥ ಏನೇನು ಬೇಕಾದ್ದು ಕೊಡುವೆ । ಕೆನೆ । ಬೆಣ್ಣೆ ಸಕ್ಕರೆ ತಂದು ಕೈಯಲ್ಲಿ ಕೊಡುವೆ । ಅನುದಿನ ಗುಣಗಳ ಪಾಡುವೆ । ನಿನ । ಗನುವಾಗಿ ಅಲಂಕಾರ ಮಾಡಿ ನಾ ನೋಡುವೆ ॥ ೨ ॥ ಹೊಲಸು ಮೈಯವನೆಂಬುವರೊ ।

ದೊಡ್ಡ । ಕುಲಗಿರಿಯನ್ನು ಎತ್ತಿದವನೆಂಬುವರೊ ॥ ಬಲುಕೇಶದವನೆಂಬುವರೊ । ಕರುಳ । ಮಾಲೆಯ ಹಾಕಿದ ಘೋರನೆಂಬುವರೊ ॥ ೩ ॥ ಭಿಕ್ಷೆ ಬೇಡಿದವನೆಂಬುವರೊ । ಭುವಿ । ರಕ್ಷಿಸ ರಾಯರ ಕಡಿದನೆಂಬುವರೊ ॥ ಲಕ್ಷ್ಮಿಯ ಕಳೆದನೆಂಬುವರೊ । ವೈ । ಲಕ್ಷಣ್ಯದವ ಬೆಣ್ಣೆಗಳ್ಳನೆಂಬುವರೊ ॥ ೪ ॥ ಮಾನ ಬಿಟ್ಟವನೆಂಬುವರೊ । ಮಹಾ । ಹೀನರ ಹಿಂದಟ್ಟಿ ಹೋದನೆಂಬುವರೊ ॥ ದಾನವ ವೈರಿಯೆಂಬುವರೊ । ಸಿರಿ । ವನಜಾಕ್ಷ ಪುರಂದರವಿಠಲನೆಂಬುವರೊ ॥ ೫ ॥ ಶ್ರೀಃ ॥

೧೨೯. ರಾಗ ಶಂಕರಾಭರಣ, ಆದಿತಾಳ.

ಹರಿಯೇ ಗತಿ ಸಿರಿ ವಿರಿಂಚಿ ಶಿವರಿಗೆ । ಹರಿಯೇ ಗತಿ ಸುರಪ ಸುರಾದಿಗಳಿಗೆ ॥ ಪಲ್ಲ ॥ ರುಕ್ಮಿಣಿದೇವಿಯ ಶಿಶುಪಾಲಗೀವೆನೆಂದು । ರುಕ್ಮ ಸಂಭ್ರಮಿಸಲು ಕೃಷ್ಣ ಬಂದು ॥ ಸಕಲ ರಾಯರುಗಳು ಸನ್ನದ್ಧರಾಗಿರೆ । ರುಕುಮಿಣಿಯನು ತಂದು ವರಿಸಿ ಆಳಿದನಾಗಿ ॥ ೧ ॥ ಹಯಾಸ್ಯನೆಂಬುವ ವೇದವ ಕದ್ದೊಯ್ಯೆ । ಹಯಗ್ರೀವನಾಗಿ ಹರಿಯುವನ ॥ ಕಾಯುವ ಖಂಡಿಸಿ ಅಜಗೆ ವೇದವನಿತ್ತು । ಕಾಯ್ದ ಕಮಲಾಕ್ಷನೆ ದೈವವೆಂದು ॥ ೨ ॥ ಭಸುಮಾಸುರನಿಗೊಂದಸದಳ ವರವಿತ್ತು । ತ್ರಿಶೂಲಧರ ಓಡಿ ಬಳಲುತಿರೆ ॥ ಬಿಸರುಹನಯನನು ಭಸುಮಾಸುರನನು । ಭಸುಮವ ಮಾಡಿ ಶಿವನ ಪೊರೆದನಾಗಿ ॥ ೩ ॥ ಸುರಪನ ರಾಜ್ಯವ ಬಲಿಯಾಕ್ರಮಿಸಲು । ಹರಿ ದಾನವ ಬೇಡಿ ಯಜ್ಞದಲಿ ॥ ಚರಣದಿಂದಿಳೆಯ ಸ್ವರ್ಗವ ಈರಡಿಮಾಡಿ । ಸುರಪಗೆ ರಾಜ್ಯವನಿತ್ತು ಪೊರೆದನಾಗಿ ॥ ೪ ॥ ಸುರಭೂಸುರರನ್ನು ಅಸುರರು ಬಾಧಿಸೆ । ಹರಿಯವತರಿಸಿ ಅಸುರರನೆಲ್ಲ ॥ ಶಿರಗಳ ತರಿದು ಸುರ ಭೂಸುರರನು । ಪೊರೆವುತ್ತಲಿಹನಾಗಿ ಪುರಂದರವಿಠಲ ॥ ೫ ॥ ಶ್ರೀಃ ॥

೧೩೦. ರಾಗ ಧನಾಸರಿ, ಅಟತಾಳ.

ಹರಿ ನೀನೆ ಗತಿಯೆಂದು ನೆರೆ ನಂಬಿದವರನು । ಮರೆತಿರುವುದು ನ್ಯಾಯವೆ ॥ ಪಲ್ಲ ॥ ಗರುಡಗಮನ ನೀ ಸಿರಿಲೋಲನಾಗಿರೆ । ಅರಸಿ

ಎನ್ನನು ಕಾಯ್ವ ದೊರೆಗಳಿನ್ನಾರಯ್ಯ ॥ ಅನುಪಲ್ಲ ॥ ಮುಟ್ಟಿ ಪೂಜಿಸಿ ನಿನ್ನ ಇಷ್ಟವ ಬೇಡುವ । ದೃಷ್ಟಿ ಎನ್ನೊಳಗಿದೆಯೆ ॥ ಕಷ್ಟವ ಪಡಲಾರೆ ಸೃಷ್ಟಿಯೊಳಗೆ ಎನ್ನ । ದುಷ್ಟ ಕರ್ಮವ ಬಿಡಿಸಿ ದಿಟ್ಟನೆಂದೆನಿಸೊ ॥ ೧ ॥ ಭುಜಗಶಯನ ನಿನ್ನ ಭಜಕರ ಹೃದಯದಿ । ನಿಜವಾಗಿ ನೀನಿಲ್ಲವೆ ॥ ಅಜನ ಪಿತನೆ ಕೇಳು ತ್ರಿಜಗವೆಲ್ಲವು ನಿನ್ನ । ಸುಜನ ಪಾಲಕನೆಂದು ಭಜನೆ ಮಾಳ್ಪದು ಕಂಡು ॥ ೨ ॥ ಭಾಗವತರರಸನೆ ಯೋಗಿಗಳೊಡೆಯನೆ । ಬಾಗಿ ಬಿನ್ನೈಪೆ ನಿನ್ನ ॥ ಸಾಗರಶಯನನೆ ನೀಗಿಸಿ ಶ್ರಮವನು । ಜಾಗುಮಾಡದೆ ಎನ್ನ ಬೇಗದಿ ಕಾಯಯ್ಯ ॥ ೩ ॥ ತುಂಟರೈವರ ತುಳಿದು ಕಂಟಕರೊಬ್ಬನ ಕಳೆದು । ಎಂಟು ಮಂದಿಯ ಗರ್ವವನಳಿದು ॥ ನಂಟ ನೀ ಬಂದೆನ್ನ ಕಂಟಕವನೆ ಬಿಡಿಸಿ । ಉಂಟಾದ ವೈಕುಂಠ ಬಂಟನೆಂದೆನಿಸೊ ॥ ೪ ॥ ಧರಣಿಯೊಳಗೆ ನೀ ಸುಜನರ ಸಲಹುವ । ಬಿರುದು ಪಡೆದವನಲ್ಲವೆ ॥ ಸಿರಿರಮಣನೆ ಎನ್ನ ಕರುಣದಿಂದಲಿ ಕಾಯೊ । ಪರಮ ಪುರುಷ ಸಿರಿ ಪುರಂದರವಿಠಲ ॥ ೫ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೩೧. ರಾಗ ಮಧ್ಯಮಾವತಿ, ಅಟತಾಳ.

ಪಾಪೋಸು ಹೋದುವಲ್ಲ ಸ್ವಾಮಿಾ ಎನ್ನ ॥ ಪಲ್ಲ ॥ ಅಪಾರ ದಿನಗಳಿಂದ ಆರ್ಜನೆ ಮಾಡಿದ ॥ ಅನುಪಲ್ಲ ॥ ಉರಗಾದ್ರಿಯಲಿ ಸ್ವಾಮಿಪುಷ್ಕರಣಿ ಮೊದಲಾದ । ಪರಿಪರಿ ತೀರ್ಥಸ್ನಾನಗಳ ಮಾಡಿ ॥ ಹರಿದಾಸರ ಕೂಡಿ ಗಿರಿರಾಯನ ಮೂರ್ತಿ । ದರುಶನದಲಿ ವ್ಯೆಮರೆತಿರಲು ಎನ್ನ ॥ ॥ ೧ ॥ ಪರಮ ಭಾಗವತರು ಹರಿಕಥೆ ಪೇಳಲು । ಪರಮ ಭಕುತಿಯಿಂದ ಕೇಳುತಿರೆ ॥ ಪರಮ ಪಾಪಿಗಳ ಪಾಲಾಗಿ ಪೋದುವು । ಪರಮ ಪುರುಷನ ಮನಸಿಗೆ ಬಂದೀಗ ॥ ೨ ॥ ಮಾಯಾದೇವಿ ಎನಗೆ ಮೆಚ್ಚಿ ಕೊಟ್ಟಿದ್ದಳು । ದಾಯಾದಿಗಳು ನೋಡಿ ಸಹಿಸಲಿಲ್ಲ ॥ ಮಾಯಾರಮಣ ನಮ್ಮ ಪುರಂದರವಿಠಲನ । ಮಾಯದಿಂದಲಿ ಮುಟ್ಟ ಮಾಯವಾದವು ಎನ್ನ ॥ ೩ ॥ ಶ್ರೀಃ ॥

## ೧೩೨. ರಾಗ ಶಂಕರಾಭರಣ, ತಾಳ.

ಲಕ್ಷ್ಮೀಕಾಂತ ಬಾರೋ ಶುಭ ಲಕ್ಷಣವಂತ ಬಾರೋ । ಪಕ್ಷಿವಾಹನ ವೇಂದವನೆ ಬಾರೊ ಪಾವನಮೂರ್ತಿ ಬಾರೊ ॥ ಪಲ್ಲ ॥ ಆದಿಮೂಲ ವಿಗ್ರಹವಿನೋದಿ ನೀನೆ ಬಾರೊ । ಸಾಧುಸಜ್ಜನ ಸತ್ಯಯೋನಿ ದಾನಿ ನೀನೆ ಬಾರೊ ॥ ೧ ॥ ಗಾಡಿಗಾರ ಕೃಷ್ಣ ನಿನ್ನ ಬೇಡಿಕೊಂಬೆ ಬಾರೊ । ರೂಢ ಮಾತನಾಡಿ ಸರ್ವ ರೂಢಿಗೊಡೆಯ ಬಾರೊ ॥ ೨ ॥ ನಿನ್ನ ಪಾದಂಗಳ ನಾನು ಬಣ್ಣಿಸಿ ಕರೆವೆ ಬಾರೊ । ಪನ್ನಂಗಶಯನ ಪುರಂದರವಿಠಲ ಬಾರೊ ॥ ೩ ॥ ಶ್ರೀಃ ॥

## ೧೩೩. ರಾಗ ನಾದನಾಮಕ್ರಿಯೆ, ಛಾಪುತಾಳ.

ಸುಲಭವಲ್ಲವೊ ಮಹಾನಂದ । ಅದ । ರೊಳಹು ತಿಳಿಯಬೇಕೊ ಗುರು ದಯದಿಂದ ॥ ಪಲ್ಲ ॥ ಬೆಕ್ಕಿನ ಇಲಿ ನುಂಗೋತನಕ । ಕಾಳ । ರಕ್ಕಸಿಯನು ಕಂಡು ಗಿಣಿ ನುಂಗೋತನಕ ॥ ಮಕ್ಕಳ ಭಕ್ಷಿಸೊತನಕ । ಮದ । ಸೊಕ್ಕಿದ ಆರಿಯನು ನರಿ ನುಂಗೋತನಕ ॥ ೧ ॥ ಇಬ್ಬರು ಒಂದಾಗೋತನಕ । ಮೂರು । ಹಬ್ಬಿದ ಬೆಟ್ಟವ ನೊಣ ನುಂಗೊತನಕ ॥ ಒಬ್ಬಳ ಕೂಡೊತನಕ । ಕೆಟ್ಟ । ಗುಬ್ಬಿಯು ರಾಜಹಂಸನಾಗೋತನಕ ॥ ॥ ೨ ॥ ಒಳಹೊರಗೊಂದಾಗೊತನಕ । ತಾನು । ತಿಳಿದೆನೆಂಬ ಭಾವ ಬಯಲಾಗೊತನಕ ॥ ಬೆಳಕಿನೊಳಗೆ ಕಾಣೊತನಕ । ನಮ್ಮ । ಪುರಂದರ ವಿಠಲನ ದಯವಾಗೊತನಕ ॥ ೩ ॥ ಶ್ರೀಃ ॥

## ೧೩೪. ರಾಗ ಕಾಂಬೋಧಿ, ಝಂಪೆತಾಳ.

ಈ ಸಿರಿಯ ನಂಬಿ ಹಿಗ್ಗಲು ಬೇಡ ಮನವೇ ॥ ಪಲ್ಲ ॥ ವಾಸುದೇವನ ಭಜಿಸಿ ಸುಖಿಯಾಗು ಮನವೇ ॥ ಅನುಪಲ್ಲ ॥ ಮಡದಿ ಮಕ್ಕಳು ಎಂದು ವಡವೆ ವಸ್ತುಗಳೆಂದು । ಸಡಗರದಿ ತಾ ಕೊಂಡು ಭ್ರಮಿಸಲೇಕೆ ॥ ಬಿಡದೆ ಯಮನಾಳುಗಳು ಬಾ ಎಂದು ಎಳೆವಾಗ । ಮಡದಿ ಮಕ್ಕಳು ಕಡೆಗೆ ತೊಲಗುವರೊ ಮರುಳೆ ॥ ೧ ॥ ನಂಟರೂರಿಗೆ ಹೋಗಿ ನಾಲ್ಕು ದಿನವಿ

ದ್ದರೆ । ಎಂಟು ದಿನದಾಯಾಸ ಹೋಗುವಂತೆ । ಉಂಟು ಸೌಭಾಗ್ಯ ವೆಂತೆಂಬ ಧೈರ್ಯವ ಬಿಟ್ಟು ವೈ । ಕುಂಠನ ಭಜಿಸು ಭ್ರಷ್ಟ ಮನವೆ ॥ ॥ ೨ ॥ ಉಂಟು ಆಶ್ರಯವೆಂದು ಬಡವನ ಕರೆತಂದು । ಕೊಟ್ಟು ಮಾಡಿದ ಧರ್ಮ ಫಲ ತನ್ನದು ॥ ಇಷ್ಟಮೂರುತಿ ನಮ್ಮ ಪುರಂದರವಿಟ್ಠಲನ । ನಿಷ್ಠೆ ಯಿಂದಲಿ ಭಜಿಸು ದುಷ್ಟ ಮನವೆ ॥ ೩ ॥ ಶ್ರೀಃ ॥

## ೧೩೫. ರಾಗ ಪೂರ್ವಕಲ್ಯಾಣಿ, ಆದಿತಾಳ.

ಕೊಟ್ಟವರು ಸರಿಯೆ । ಕೊಡದೆ । ಬಿಟ್ಟವರು ಸರಿಯೆ ॥ ಪಲ್ಲ ॥ ಇಕ್ಕಿದವರಿಗುಂಟು । ಮುದದಲಿ । ಸೊಕ್ಕಿದರೇನುಂಟು ॥ ರಕ್ಕಸಾಂತಕ ನಮ್ಮ ಲಕುಮಿಪತಿಯ ಮೊರೆ । ಹೊಕ್ಕವರಾದ ಭಜಕರಿಗೆ ॥ ೧ ॥ ಅರಸನಾದರು ಸರಿಯೆ । ನಮಗೆ । ತಿರುಕನಾದರು ಸರಿಯೆ ॥ ಸರಸವಿರಸದಿಂ ನುಡಿದರೇನು ನರ । ಹರಿಪದಕಮಲವ ನಿರುತ ಭಜಿಪರಿಗೆ ॥ ೨ ॥ ಪುಟ್ಟಿಸಿದ ಧೊರೆಯು । ನಮಗೆ । ಹೊಟ್ಟೆಗೆ ಕೊಡದಿಹನೆ ॥ ಬೆಟ್ಟದೊಡೆಯ ನಮ್ಮ ಪುಂದರವಿಠಲನ । ಘಟ್ಟಿಯಾಗಿ ನಂಬಿದ ದಾಸರಿಗೆ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೩೬. ರಾಗ ನಾದನಾಮಕ್ರಿಯೆ, ಅಟತಾಳ.

ನಿಂದಕರಿರಬೇಕಿರಬೇಕು ॥ ಪಲ್ಲ ॥ ಹಂದಿಯಿದ್ದರೆ ಕೇರಿ ಹ್ಯಾಂಗೆ ಶುದ್ಧಿಯೊ ಹಾಂಗೆ ॥ ಅನುಪಲ್ಲ ॥ ಅಂದಂದು ಮಾಡಿದ ಪಾಪವೆಂಬ ಮಲ । ತಿಂದು ಹೋಗುವರಯ್ಯ ನಿಂದಕರು ॥ ವಂದಿಸಿ ಸ್ತುತಿಸುವ ಜನರೆಲ್ಲರು ನಮ್ಮ । ಪೊಂದಿದ ಪುಣ್ಯವನೊಯ್ಯುವರಯ್ಯ ॥ ೧ ॥ ದುಷ್ಟ ಜನರು ಈ ಸೃಷ್ಟಿಯೊಳಿದ್ದರೆ । ಶಿಷ್ಟಜನರಿಗೆಲ್ಲ ಕೀರ್ತಿಗಳು ॥ ಇಷ್ಟಪ್ರದ ಶ್ರೀಕೃಷ್ಣ ನಿನ್ನೊಳು । ಇಷ್ಟೇ ವರವನು ಬೇಡುವೆನಯ್ಯ ॥ ೨ ॥ ದುರುಳ ಜನಂಗಳು ಚಿರಕಾಲವಿರುವಂತೆ । ಕರವ ಮುಗಿದು ವರ ಬೇಡುವೆನು ॥ ಪರಿಪರಿ ತಮಸಿಗೆ ಗುರಿಯಹರಲ್ಲದೆ । ಪರಮ ದಯಾನಿಧೆ ಪುರಂದರ ವಿಠಲ ॥ ೩ ॥ ಶ್ರೀಃ ॥

## ೧೩೭. ರಾಗ ಸೌರಾಷ್ಟ್ರ, ಅಟತಾಳ.

ಮಾಯದ ಸಂಸಾರ ಮಮಕಾರ ಹಿಂಗಿತು ಇನ್ನೇನಿನ್ನೇನು ॥ ಪಲ್ಲ ॥ ತೋಯಜಾಕ್ಷನ ದಯ ನಮಗೀಗ ದೊರಕಿತು ಇನ್ನೇನಿನ್ನೇನೂ ॥ ॥ ಅನುಪಲ್ಲ ॥ ಭಾವಿಸಿದ್ದೆಲ್ಲವು ಭಾವಿಪಾಲಾದಮೇಲಿನ್ನೇನಿನ್ನೇನು । ಶೇವಿಸಿದ ಗಣಪ ಮಂಗನಾದಮೇಲಿನ್ನೇನಿನ್ನೇನು ॥ ೧ ॥ ಒತ್ತಿ ಹಿಡಿದ ಕಂಭ ವ್ಯರ್ಥವಾದಮೇಲಿನ್ನೇನಿನ್ನೇನು । ಜತ್ತಾದ ಜನರೆಲ್ಲ ಜರಿದು ಪೋದ ಮೇಲಿನ್ನೇನಿನ್ನೇನು ॥ ೨ ॥ ತೋಡಲು ಭಾವಿ ಭೇತಾಳ ಹೊರಟಿತು ಇನ್ನೇನಿನ್ನೇನು । ನಾಡಜನಕೆ ನಾಲ್ಕುನಾಲಿಗುಂಟಾಯಿತು ಇನ್ನೇನಿನ್ನೇನು ॥ ೩ ॥ ಬರಹೋಗುವರ ಮುಂದೆ ಮರಿಯಾದೆ ಹೋಯಿತು ಇನ್ನೇನಿನ್ನೇನು । ಸರಸ ಸಂಸಾರದ ಸವಿ ಹಾರಿಹೋಯಿತು ಇನ್ನೇನಿನ್ನೇನು ॥ ೪ ॥ ಕಯ್ಯಿಗೆ ಬಂದಪರಂಜಿ ಕಬ್ಬಿಣವಾಯಿತು ಇನ್ನೇನಿನ್ನೇನು । ಬಯಸಲೇತಕೆ ಪಡದ ಭಾಗ್ಯ ಬಯಲಾಯಿತು ಇನ್ನೇನಿನ್ನೇನು ॥ ೫ ॥ ಅರ್ಥಿಯ ಸಂಸಾರ ಅಡವಿಪಾಲಾದಮೇಲಿನ್ನೇನಿನ್ನೇನು । ಮಿತ್ರರಾದವರೆಲ್ಲ ಶತ್ರುಗಳಾದಮೇಲಿನ್ನೇನಿನ್ನೇನು ॥ ೬ ॥ ಗಂಡ (ಗಂಡು) ಮಕ್ಕಳು ಯಮಗಂಡರಾದಮೇಲಿನ್ನೇನಿನ್ನೇನು । ಪಂಡಿತ ಶ್ರೀಪುರಂದರ ವಿಟ್ಠಲರಾಯ ಇನ್ನೇನಿನ್ನೇನು ॥ ೭ ॥ ಶ್ರೀಃ ॥

## ೧೩೮. ರಾಗ ಪೂರ್ವಕಲ್ಯಾಣಿ, ಆದಿತಾಳ.

ಯಾತಕೆ ನೋಡುತಿ ಯಮನ ಪಾಶಕೆ ಬೀಳುತಿ ॥ ಪಲ್ಲ ॥ ನಾಥ ನಾರಾಯಣ ಹರಿ ಕೃಷ್ಣ ಎಂಬುವ । ಕೀರ್ತನೆಯನು ಕೇಳಿ ದೂಷಿಸಿ ನಗುತಿ ॥ ಅನುಪಲ್ಲ ॥ ಮೂಢತನದಿ ಮಲಮೂತ್ರದ ಭಾಂಡಕೆ ಬಹು ಶೃಂಗಾರವ ಮಾಡುತಿ । ಗಾಢಾಂಧಕಾರದ ಮದ ಉನ್ಮತ್ತದಿ ಕವಿದು ಮುಗ್ಗುಂಡಿಗೆ ಬೀಳುತಿ ॥ ಪಾಡಿ ಪೊಗಳಿ ನಿನ್ನ ಬದಿಯಲ್ಲಿರುವರು ಕಾದು ಕೊಂಡಿಹರೆಂದು ನೋಡುತಿ । ಪೀಡಿಸಿ ಕಾಲನ ದೂತರು ಎಳೆವಾಗ ಬೇಡಿ ನೀ ಭಯದಲಿ ಕೂಗುತಿ ॥ ೧ ॥ ಖಂಡ ಮಾಂಸಗಳು ತುಂಬಿದ ದೇಹವ ಕಂಡು ಸಂತೋಷದಿ ಉಬ್ಬುತಿ । ಕಂಡಕಂಡದಾಪೇಕ್ಷಿಸಿ ಮನ

ದಲಿ ಉಂಡೇನೆನ್ನುತ ಹಿಗ್ಗುತಿ ॥ ಕಂಡುಕೊಳ್ಳದೆ ಮುಂದಿನ ಮಾರ್ಗವ ಪುಂಡಾಟಗಳನು ಆಡುತಿ । ಕಂಡ್ಯಮದೂತರು ಕೊಂಡೊಯ್ದು ನಿನ್ನನು ದಂಡಿಸುವಾಗ ಕಣ್ಣುಕಣ್ಬಿಡುತಿ ॥ ೨ ॥ ದುಷ್ಟ್ಯಮದೂತರು ಕಟ್ಟಿ ಎಳೆಯಲು ಬಿಟ್ಟು ಪೋಪುದೀ ಪ್ರಾಣವು । ಕಟ್ಟಿದ ಮನೆಯನು ಬಿಟ್ಟು ಹೋಗುವಂತೆ ಬಿಟ್ಟು ಪೋಪುದೀ ಜೀವವು ॥ ಒಟ್ಟಿದ ಕಸವು ಸುಟ್ಟು ಹೋಗುವ ಹಾಗೆ ಸುಟ್ಟು ಪೋಪುದೀ ದೇಹವು । ಹುಟ್ಟಿದ ಮಕ್ಕಳು ಕೊಟ್ಟಿಗೆ ಪಶುಗಳು ಪೆಟ್ಟಿಗೆ ನಗ ಬೆನ್ನಟ್ಟಿ ಬಾರವು ॥ ೩ ॥ ಇರುಳು ಹಗಲು ನರಹರಿಯನು ತುತಿಸದೆ ನರಪಶುಗಳ ಕೊಂಡಾಡುತಿ । ಸುರಧೇನುವು ತಾನಿರುತಿರೆ ನೆರೆಮನೆ ಹುಳಿಮಜ್ಜಿಗೆಯನು ಬೇಡುತಿ ॥ ಹರಿವ ಭಾಗೀರಥಿ ಎದುರಲ್ಲಿರೆ ನೀ ಒರತೆಯ ಜಲಪಾನ ಮಾಡುತಿ । ಮುರಹರ ನಗಧರ ಮುಕುಂದ ಎನ್ನದೆ ನರಕಬಾಧೆಗೆ ಗುರಿಯಾಗುತಿ ॥ ೪ ॥ ಸಿಟ್ಟಲಿ ನೀ ಹರಿದಾಸರ ಮುಖವನು ದೃಷ್ಟಿಸಿ ನೋಡದೆ ಹೋಗುತಿ । ಮುಷ್ಟಿಯೊಳಗೆ ಒಂದಿಷ್ಟು ಕೊಡದೆ ನಿನ್ನ ಹೊಟ್ಟೆ ತುಂಬುವುದೆ ನೋಡುತಿ ॥ ಬಟ್ಟಬಯಲ ಸಂಸಾರದಲನುದಿನ ದಿಟ್ಟತನದಲೋಲ್ಯಾಡುತಿ । ನೆಟ್ಟನೆ ಪುರಂದರವಿಠಲನೆನೆದೆ ಮುಕ್ತಿ ಬಟ್ಟೆಯ ಕಾಣದೆ ಹೋಗುತಿ ॥ ೫ ॥

೧೪೯. ರಾಗ ಕಾನಡ, ಅಟತಾಳ.

ಶ್ರೀಕಾಂತ ಎನಗಿಷ್ಟು ದಯಮಾಡೊ ತಂದೆ । ಏಕಾಂತದಲಿ ನಿನ್ನ ಭಜಿಸುವ ಸೌಭಾಗ್ಯ ॥ ಪಲ್ಲ ॥ ಧನದಾಸೆಗಾಗಿ ನಾ ಧನಿಕರ ಮನೆಗಳ । ಕೊನೆಬಾಗಿಲಲಿ ನಿಂದು ತೊಳಲಿ ಬಳಲಿದೆನೊ ॥ ೧ ॥ ದೇಹಾಭಿಮಾನದಿಂದ ವಿಹಿತ ಧರ್ಮವ ತೊರೆದು । ಸ್ನೇಹಾನುಬದ್ಧನಾಗಿ ಸತಿಸುತರ ಪೊರೆದೆನೊ ॥ ೨ ॥ ಏನಾದರೇನೆನ್ನ ಹೀನಗುಣಗಳೆಲ್ಲ । ಮನ್ನಿಸಿ ಸಲಹೊ ಶ್ರೀಪುರಂದರವಿಠಲ ॥ ೩ ॥ ಶ್ರೀಃ ॥

೧೫೦. ರಾಗ ಕಾಂಬೋಧಿ, ಝುಂಪೆತಾಳ.

ಏನು ಮೆಚ್ಚಿದೆಲೆ ಹೆಣ್ಣೆ ಏನು ಮರುಳಾದೆ ॥ ಪಲ್ಲ ॥ ನೋಟದಿ ಚಲುವನಿವನೆಂಬೆನೆ ಚಂಚಲ । ಮಾಟದಿ ಚಲುವನೆಂಬೆನೆ ಬೆನ್ನುಗುಪುಟು ॥

ಗೂಟದಂಥ ಹಲ್ಲು ಮೊಳದುದ್ದದ ಮೋರೆ। ಬೂಟಕತನದಿ ಬಾಯ್ತೆರೆದು ಅಂಜಿಪಗೆ ॥ ೧ ॥ ಅಣುರೂಪದವನಿವ ನಿಲುವುಳ್ಳ ನರನಲ್ಲ । ಬನವ ತರಿವನಂತೆ ಕೈಯಲ್ಲಿ ಕೊಡಲಿ ॥ ಮನುಜರನು ತಾ ಬಿಟ್ಟು ಕಪಿಗಳನು ಕೂಡುವ। ಮನೆಮನೆಯನು ಪೊಕ್ಕು ಕದ್ದು ತಿಂಬುವಗೆ ॥ ೨ ॥ ಗಂಭೀರ ಪುರುಷನಿವನೆಂಬೆನೆ ದಿಗಂಬರ । ಅಂಬರದೊಳಗೆ ಕುದುರೆಯ ಕುಣಿಸುವ ॥ ಅಂಬುಜಾಕ್ಷ ಸಿರಿಪುರಂದರವಿಟ್ಠಲಗೆ। ಸಂಭ್ರಮದಿ ನೀ ಮೆಚ್ಚಿ ಮದುವ್ಯಾದೆಯಲ್ಲೆ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೪೧. ರಾಗ ಧನ್ಯಾಸಿ, ಲಾವಣಿಧಾಟಿ.

ಕೃಷ್ಣನ ಭಜಿಪಗೆ ಮುಕುತಿಲ್ಲೆಂಬೊ । ಭ್ರಷ್ಟನ ಬಾಯೊಳಗೊಂದು ಕೆರ ॥ ಪಲ್ಲ ॥ ನಿಷ್ಠೆಯೊಳ್ಹರಿದಾಸರ ಸೇವಿಸದ ಕ । ನಿಷ್ಟನ ಬಾಯೊಳಗೊಂದುಕೆರ ॥ ಅನುಪಲ್ಲ ॥ ನರಹರಿ ಮಹಿಮೆಯ ಸುಳ್ಳೆಂತೆಂಬುವ ನರನ ಬಾಯಿಯೊಳಗೊಂದುಕೆರ । ಪರಿಪರಿಯಿಂದಲಿ ಕುಹಕವನಾಡುವ ದುರುಳನ ಬಾಯೊಳಗೊಂದುಕೆರ ॥ ಹರಿ ಸರ್ವೋತ್ತಮನೆಂದು ತಿಳಿಯದಹಂಕಾರಿಯ ಬಾಯೊಳಗೊಂದುಕೆರ । ದುರುಳನಾಗಿ ಹರಿಶರಣರ ಸೇರದೆ ಮೆರೆವನ ಬಾಯೊಳಗೊಂದುಕೆರ ॥ ೧ ॥ ಶ್ರುತಿಶಾಸ್ತ್ರಗಳು ಸುಳ್ಳೆಂತೆಂಬುವ ಶುನಕನ ಬಾಯೊಳಗೊಂದುಕೆರ । ಮತಿಯಿಲ್ಲದೆ ಮದನನಯ್ಯಗೆ ದ್ರೋಹವ ಮಾಳ್ಪನ ಬಾಯೊಳಗೊಂದುಕೆರ ॥ ಗತಿ ನೀನೇ ಹರಿಯೆಂತಿರುವರ ಕಂಡು ಕಾಡುವನ ಬಾಯೊಳಗೊಂದುಕೆರ । ಅತಿ ಹರುಷದಿ ಹರಿಕಥೆ ಪೇಳ್ವಲ್ಲಿ ಅಡ್ಡಿ ಪೇಳ್ವನ ಬಾಯೊಳಗೊಂದುಕೆರ ॥ ೨ ॥ ನಾನೇ ದೇವರು ಎಂದು ಕುಣಿವ ಬಲು ಹೀನನ ಬಾಯೊಳಗೊಂದುಕೆರ। ಮಾನಿತರಾದರ ಹಿಂದುಮುಂದಾಡುವ ಕೋಣನ ಬಾಯೊಳಗೊಂದುಕೆರ ॥ ನಾನಾ ಪರಿಯಲಿ ನಡತೆಹೀನನಾಗಿ ನಡೆವನ ಬಾಯೊಳಗೊಂದುಕೆರ । ಗಾನಲೋಲ ನಮ್ಮ ಪುರಂದರವಿಠಲನ ನೆನೆಯದ (ಕಾಣದನ) ಬಾಯೊಳಗೊಂದುಕೆರ ॥ ೩ ॥ ಶ್ರೀಃ ॥

೧೪೨. ರಾಗ ನಾದನಾಮಕ್ರಿಯೆ, ತಾಳ.

ಘಟಿಕಾಚಲದಿ ನಿಂತ । ಶ್ರೀಹನುಮಂತ ॥ ಪಲ್ಲ ॥ ಘಟಿಕಾಚಲದಿ ನಿಂತ ಪಟು ಹನುಮಂತನ । ಪಠನೆಯ ಮಾಡಲುತ್ಕಟದಿ ಪೊರೆವೆನೆಂದು ॥ ಅನುಪಲ್ಲ ॥ ಚತುರಯುಗದಿ ತಾನು । ಮುಖ್ಯಪ್ರಾಣನು । ಚತುರಮುಖನಯ್ಯನ ॥ ಚತುರಮೂರುತಿಗಳನು ಚತುರತನದಿ ಭಜಿಸಿ । ಚತುರ್ಮುಖನಾಗಿ ಜಗಕೆ ಚತುರ್ವಿಧ ಫಲ ಕೊಡುತ ॥ ೧ ॥ ಸರಸಿಜ ಭವಗೋಸ್ಕರ । ಕಲ್ಮಷದೂರ । ವರ ಚಕ್ರ ತೀರ್ಥ ಸರ ॥ ಮೆರೆವಾಚಲದಿ ನಿತ್ಯ ನರಹರಿಗೆದುರಾಗಿ । ಸ್ಥಿರಯೋಗಾಸನದಿ ಕರೆದು ವರಗಳ ಕೊಡುತ ॥ ॥ ೨ ॥ ಶಂಖ ಚಕ್ರವ ಧರಿಸಿ । ಭಕ್ತರ ಮನಃ । ಪಂಕವ ಪರಿಹರಿಸಿ ॥ ಪಂಕಜನಾಭ ಶ್ರೀಪುರಂದರವಿಠಲನ । ಬಿಂಕದ ಸೇವಕ ಸಂಕಟ ಕಳೆಯುತ ॥ ೩ ॥ ಶ್ರೀಃ ॥

೧೪೩. ರಾಗ ಆನಂದಭೈರವಿ, ತಾಳ.

ನೋಡದಿರು ಪರಸ್ತ್ರೀಯರ ॥ ಪಲ್ಲ ॥ ನೋಡಿದರೆ ಕೇಡಹುದು ತಪ್ಪದಿದಕೊ ॥ ಅನುಪಲ್ಲ । ನೋಡಿದರೆ ಸ್ತ್ರೀಹತ್ಯವು । ನುಡಿಸಿ ಮಾ । ತಾಡಿದರೆ ಗೋಹತ್ಯವು ॥ ಕಾಡಿದರೆ ಶಿಶುಹತ್ಯವು । ವ್ಯೈ । ಗೂಡಿದರೆ ಬ್ರಹ್ಮತ್ಯವು ॥ ೧ ॥ ಎರಳೆಗಂಗಳರೊಲುಮೆಗೆ । ಮರುಳಾಗಿ । ಬರಿದೆ ನೀ ಕೆಡಬೇಡವೊ ॥ ದುರುಳ ಯಮಲೋಕದಲ್ಲಿ । ಕರೆದೊಯ್ದು । ಉರಿಗಂಬವಪ್ಪಿಸುವರೊ ॥ ೨ ॥ ಮರುಳು ಮಾನವನೆ ಕೇಳೊ । ಪರಸತಿಯ । ಉರಿಯೆಂದು ನೋಡು ನಿತ್ಯ ॥ ವರದ ಪುರಂದರವಿಠಲನ । ನೆನೆದರೆ । ಸ್ಥಿರವಾದ ಮುಕುತಿಯಹುದು ॥ ೩ ॥ ಶ್ರೀಃ ॥

೧೪೪. ರಾಗ ಬೇಹಾಗ್, ತಾಳ.

ನಮ್ಮ ದೇವ ನಿಮ್ಮ ದೇವ ತಮ್ಮ ದೇವನೆನಬೇಡಿ । ಬೊಮ್ಮನ ಪಡೆದ ದೇವನೊಬ್ಬನೆ ಕಾಣಿರೊ ॥ ಪಲ್ಲ ॥ ಆದಿಯಲ್ಲಿ ಕರಿ ಮಕರಿಗೆ ಸಿಕ್ಕಿ ಬಾಧೆಯಿಂದ । ಆದಿದೇವ ಕಾಯೆಂದು ಮೊರೆಯಿಡಲು ॥ ಆ ದೇವ ಈ ದೇವ

ಕಾಯ್ದುದಿಲ್ಲ ಕೇಳಿ । ಮಾಧವ ತಾ ಬಂದು ಸಲಹಿದ ಕಾರಣ ॥ ೧ ॥ ಹರಿ ಹರ ಬ್ರಹ್ಮರೊಳು ಹಿರಿಯವರಾರೆಂದು । ಪರಿಕಿಸಿ ಸುರಾಸುರರೆಲ್ಲರನು ॥ ವರ ಭೃಗುಮುನಿ ಬಂದು ಕರವೆತ್ತಿ ಸ್ಥಿರವಾಗಿ । ಹರಿಯೇ ಪರದೈವವೆಂದು ಅರುಹಿದ ಕಾರಣ ॥ ೨ ॥ ಏಕೋ ವಿಷ್ಣು ಎಂತೆಂದು ವೇದಗಳು ಅ । ನೇಕ ಮುಖಗಳಿಂದ ಸಾರುತಿವೆ ॥ ಕಾಕುಮತಿಯು ನೀಗಿ ಜೋಕೆಯಿಂದ ಭಜಿಸಿರೊ । ಶ್ರೀಕಾಂತ ಪುರಂದರವಿಠಲರಾಯನ ॥ ೩ ॥

### ೧೪೫. ರಾಗ ಶಂಕರಾಭರಣ, ತಾಳ.

ಬುದ್ಧಿ ಮಾತು ಹೇಳಿದರೆ ಕೇಳಬೇಕಮ್ಮ । ಮಗಳೆ ಮನ । ಶುದ್ಧಳಾಗಿ ಗಂಡನೊಡನೆ ಬಾಳಬೇಕಮ್ಮ ॥ ಪಲ್ಲ ॥ ಅತ್ತೆ ಮಾವಗಂಜಿಕೊಂಡು ನಡೆಯಬೇಕಮ್ಮ । ಮಗಳೆ । ಚಿತ್ತದೊಲ್ಲಭನಕ್ಕರೆಯನ್ನು ಪಡೆಯಬೇಕಮ್ಮ ॥ ಹೊತ್ತು ಹೊತ್ತಿಗೆ ಮನೆಯ ಕೆಲಸ ಮಾಡಬೇಕಮ್ಮ । ಮಗಳೆ । ಹತ್ತು ಮಂದಿ ಒಪ್ಪುವ ಹಾಗೆ ನುಡಿಯಬೇಕಮ್ಮ ॥ ೧ ॥ ಕೊಟ್ಟುಕೊಂಬುವ ನೆಂಟರೊಡನೆ ದ್ವೇಷ ಬೇಡಮ್ಮ । ಮಗಳೆ । ಅಟ್ಟು ಉಂಬುವ ಕಾಲದಲ್ಲಿ ಆಟ ಬೇಡಮ್ಮ ॥ ಹಟ್ಟಿಬಾಗಿಲಲ್ಲಿ ಬಂದು ನಿಲ್ಲಬೇಡಮ್ಮ । ಮಗಳೆ । ಕಟ್ಟಿ ಆಳುವ ಗಂಡನೊಡನೆ ಸಿಟ್ಟು ಬೇಡಮ್ಮ ॥ ೨ ॥ ನೆರೆಹೊರೆಯವರಿಗೆ ನ್ಯಾಯವನ್ನು ಹೇಳಬೇಡಮ್ಮ । ಮಗಳೆ । ಗರುವ ಕೋಪ ಮತ್ಸರವನ್ನು ಮಾಡಬೇಡಮ್ಮ ॥ ಪರರ ನಿಂದಿಪ ಹೆಂಗಳೊಡನೆ ಸೇರಬೇಡಮ್ಮ । ಮಗಳೆ । ಗುರು ಪುರಂದರವಿಠಲನ ಸ್ಮರಣೆ ಮರೆಯಬೇಡಮ್ಮ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

### ೧೪೬. ರಾಗ ಪೀಲು, ತಾಳ.

ಮತಿಗೆಟ್ಟು ಕಾಲವ ಕಳೆಯಬೇಡ । ಸ । ದ್ಗತಿ ಕೊಡುವ ಹರಿಯ ನಂಬಲೊ ಮೂಢ ॥ ಪಲ್ಲ ॥ ಕೋತಿಯಂತೆ ಕುಣಿದಾಡಬೇಡ । ಸು । ನೀತಿಮಾರ್ಗವ ಪಿಡಿಯೆಲೊ ಗಾಢ ॥ ಅನುಪಲ್ಲ ॥ ಹಾಳು ಕೇರಿಯೊಳು ತಿರುಗುವ ಹಂದಿ । ಯಂತೆ । ಬಳಲುತ್ತೆ ನಾನಾ ಜನ್ಮವೆತ್ತಿ ಬಂದಿ ॥

ಬಾಳುವ ಕಾಲಕ್ಕೆ ಮದವೇರಿ ನಿಂದಿ । ಮುಂದೆ । ಮೂಳ ಮುಪ್ಪಿನಲ್ಲಿ ವಿಚಾರ ಪೊಂದಿ ॥ ೧ ॥ ಮಡದಿ ಮಕ್ಕಳ ಪ್ರಪಂಚಕ್ಕಾಗಿ । ದುಡಿ । ದುಡಿದು ಹಾಕಿದ್ಯೊ ಮುದಿಕೋಣನಾಗಿ ॥ ಮಡಿದು ಪೋಪಾಗ ಯಾರಿಲ್ಲವಾಗಿ । ಇನ್ನು । ದೃಢದಿ ನಿನ್ನೊಳು ನೀನು ತಿಳಿಯೊ ಗೂಗಿ (ಗೂಬೆ) ॥ ॥ ೨ ॥ ರಾಯರೇರೋದು ಮದಗಜವಂತೆ । ಮತ್ತೆ । ಆಯದಿ (ಬಾಗಿ) ನಡೆಯೋದು ಬಾಳೆ ಸುಳಿಯಂತೆ ॥ ಹೇಯ ಸಂಸಾರ ಸ್ಥಿರವಲ್ಲವಂತೆ । ನಮ್ಮ । ಜೀಯ ಪುರಂದರವಿಠಲ ದಯಮಾಡನಂತೆ ॥ ೩ ॥ ಶ್ರೀಃ ॥

## ೧೪೭. ರಾಗ ಅಹೇರಿ, ತಾಳ.

ಶ್ರೀಕೃಷ್ಣರಾಯನ ತೋರಿಸೆ ಮಾತನಾಡಿಸೆ ॥ ಪಲ್ಲ ॥

**ಶ್ಲೋಕ:**— ಧೀರಾ ರಂಗನು ಬಾರದೆ ಇಹನೇನೆ । ಮಾರಾನಯ್ಯಗೆ ಮಾಡಿದ ತಪ್ಪು ಯೇನೆ ॥ ವಾರಿಜಾಕ್ಷಿ ನೀ ವೊಂದು ಮಾತಾಡಿ ಬಾರೆ । ನೀರಾಜಾಕ್ಷನ ನಿಮಿಷದಿ ಕರೆದು ತಾರೆ ॥ ೧ ॥

**ಪದ:**— ಗಂಧ ಕಸ್ತೂರಿ ತಾರೆಂದೆನೆ । ಪೂಸೆಂದೆನೆ ವೀಳೆಗೆ ತಾಳೆಂದೆನೆ ॥ ಅಂದ ಮಾತಿಗೆ ತಾ ಮುನಿದನೆ । ಅರವಿಂದನೆ ಪೂರ್ಣೇಂದು ವದನೆ ॥ ೧ ॥

**ಶ್ಲೋಕ:**— ವೇಣೂನಾದದಿ ಮರುಳುಮಾಡಿದ ನಮ್ಮ । ಕಾಣಾದೆಂತಿಹೆ ಕಸ್ತೂರಿ ವೆಂಕಟನ್ನ ॥ ಪ್ರಾಣಾನಾಥನು ಮುನಿದು ಮತ್ಯಾಕೆ ಬಾರ । ಜಾಣೇ ಹೋಗಿ ನೀ ವೇಣುನಾದನ್ನ ತಾರೆ ॥ ೨ ॥

**ಪದ:**— ವಾಸುದೇವನ ಕರೆದು ತಾರೆ । ಇಲ್ಲಿಗೆ ನೀರೆ ಬೇಸರದೆ ನೀ ಸಾರೆ ॥ ಭಾಷೆ ಕೊಟ್ಟಿದ್ದಾನೆ ರಂಗನು । ದಯಾಪಾಂಗನು ಕರುಣಾಂತರಂಗನು ॥ ೨ ॥

**ಶ್ಲೋಕ:**— ಬಿಟ್ಟಾ ಕಂಗಳು ಭಾವೆ ನೀ ಕೇಳಿದೇನೆ । ಸಿಟ್ಟೊ ಮಾಡಿದ ಶ್ರೀಹರಿ ನಮ್ಮ ಮೇಲೆ ॥ ಇಷ್ಟೂ ದಿವಸವು ಹ್ಯಾಗೆ ಬಿಟ್ಟಿಹೆ ನಮ್ಮ । ಕಷ್ಟ ಹೆಂಗಸು ಕೃಷ್ಣನ ಕರೆದು ತಾರೆ ॥ ೩ ॥

**ಪದ:**— ಬಿನ್ನಾಣ ಮಾತಲ್ಲ ಜಾಣೆ। ಕೇಳೆ ನಿನ್ನಾಣೆ ತನ್ನಳವಲ್ಲ ವೇನೆ ॥ ಮುನ್ನಿನ ಹಂಬಲು ಮರೆತನೆ । ಜಗತ್ಕರ್ತನೆ ಎನ್ನನಗಲುವ ನೇನೆ ॥ ೩ ॥

**ಶ್ಲೋಕ:**— ಮಂಗಾಳಾಂಗನು ಹೀಂಗೆ ಮಾಡುವರೇನೆ। ಭಂಗಾ ಬಡುತಿಹೆನಂಗಜಾನಯ್ಯಗಾಗಿ ॥ ರಂಗೂಮಾಣಿಕದುಂಗುರ ಕೊಡುವೆ ನಿನಗೆ। ತಂಗೀ ಹೋಗಿ ನೀ ರಂಗನ ಕರೆದು ತಾರೆ ॥ ೪ ॥

**ಪದ:**— ಮಲ್ಲಿಗೆ ಮಂಟಪದೊಳಗೆಲ್ಲ । ಇದ್ದೆವು ಎಲ್ಲ ನಲ್ಲನು ಬರಲಿಲ್ಲ ॥ ಕಲ್ಲು ಮನಸು ಮಾಡಿದನಲ್ಲ । ನೋಡಿದನಲ್ಲ ಹೀಗೆ ಮಾ ಡೋರೆಸಲ್ಲ ॥ ೪ ॥

**ಶ್ಲೋಕ:**— ಮಂದಾಯಾನೆ ಮೂಕುಂದನಾ ಮಂದಿರಕ್ಕೆ । ಇಂದೂ ಹೋಗಿ ನೀ ವಿನಯದಿಂದಲಿ ಸಾರೆ॥ ಒಂದೇ ಮಾತಿಲಿ ಹೊಳೆವು ತಿಳೀದು ಬಾರೆ। ವೃಂದಾವನದಿ ಗೋವಿಂದನ ಕರೆದು ತಾರೆ ॥ ೫ ॥

**ಪದ:**— ಧರೆಯೊಳು ಪುರಂದರವಿಠಲನೆ । ಸರ್ವೇಶ್ವರನೆ ದೊರೆ ಮುದ್ದು ವೆಂಕಟನೆ ॥ ಹರುಷದಿಂದಲಿ ಬಂದು ನೆರೆವಂತೆ । ಮಾಡೆಲೆ ಕಾಂತೆ ಕೇಳೆ ಸದ್ಗುಣವಂತೆ ॥ ೫ ॥ ಶ್ರೀಃ ॥

## ೧೪೮. ರಾಗ ಕಲ್ಯಾಣಿ, ತ್ರಿಪುಟತಾಳ.

ಅಂದದಿಂದ ನಾ ನಿನ್ನ ನೆರೆನಂಬಿದೆನೊ ಕೃಷ್ಣ॥ ಪಲ್ಲ ॥ ತಂದೆ ಗೋವಿಂದ ಮುಕುಂದ ನಂದನ ಕಂದ ॥ ಅನುಪಲ್ಲ ॥ ಬಲವಂತನುತ್ತಾನುಪಾದ ರಾಯನ ಕಂದ। ಮಲತಾಯಿ ನೂಕಲು ಅಡವಿಯೊಳು ॥ ಜಲಜಾಕ್ಷ ನಿನ್ನ ಕುರಿತು ತಪವಿರಲಾಗಿ । ಒಲಿದು ಧ್ರುವಗೆ ಪಟ್ಟಗಟ್ಟಿದ್ದು ಕೇಳಿ ॥ ॥ ೧ ॥ ನಕ್ರಂಗೆ ಗಜರಾಜ ಸಿಕ್ಕಿ ಸರಸಿಯೊಳು । ದುಃಖದಿ ಶ್ರೀಹರಿ ಸಲ ಹೆನ್ನಲು ॥ ಚಕ್ರದಿ ನೆಗಳ ಕಂಠವ ತರಿದು ಭಕ್ತನ। ವಕ್ರವ ಪರಿದಾದಿ ಮೂಲನೆಂಬುದ ಕೇಳಿ ॥ ೨ ॥ ದ್ರುಪದನ ಸುತೆಯು ದುಶ್ಶಾಸನ ಸಭೆ ಯೊಳು । ಕಪಟದಿ ಸೀರೆಯು ಸೆಳೆಯುತಿರೆ ॥ ಸುಪರ್ಣವಾಹನ ಕೃಷ್ಣ

ಸಲಹೆಂದರಬಲೆಯು । ಅಪಮಾನದಿಂ ಕಾಯ್ದ ಶ್ರೀಹರಿಯೆಂಬುದ ಕೇಳಿ ॥ ॥ ೩ ॥ ಹರಿನಾರಾಯಣ ಯೆಂದು ಪ್ರಹ್ಲಾದ ಒರೆಯಲು । ದುರುಳ ದಾನವನವನೊಳು ಮುನಿದು ॥ ಕರೆ ನಿನ್ನ ಒಡೆಯನ ಎಂದು ಗರ್ಜಿಸೆ ನರ । ಹರಿ ಬಂದು ಒಡನೆಯೆ ಕಾಯ್ದನೆಂಬುದ ಕೇಳಿ ॥ ೪ ॥ ಅಂಬರೀಷಗೆ ದೂರ್ವಾಸ ಶಾಪವ ಕೊಡೆ । ಅಂಬುಜಲೋಚನ ಚಕ್ರದಿಂದ ॥ ಬೆಂಬತ್ತಿ ಮುನಿಯ ಶಾಪವ ಪರಿಹರಿಸಿದ । ಕಂಬು ಚಕ್ರಧರ ಹರಿಯೆಂಬುದ ಕೇಳಿ ॥ ೫ ॥ ಛಲ ಬೇಡ ರಾಮನ ಲಲನೆಯ ಬಿಡು ಯೆಂದು । ತಲೆಹತ್ತರವಗೆ ಪೇಳಲು ತಮ್ಮನ ॥ ಬಳಲಿಸಿ ಹೊರಡಿಸಲವ ನಿನ್ನ ಮೊರೆಹೊಗೆ । ಸಲೆ ವಿಭೀಷಣಗೆ ಲಂಕೆಯನಿತ್ತುದ ಕೇಳಿ ॥ ೬ ॥ ಸುರ ನರ ನಾಗಲೋಕದ ಭಕ್ತಜನರನ್ನು । ಪೊರೆಯಲೋಸುಗ ವೈಕುಂಠದಿಂದ ॥ ಸಿರಿಸಹಿತಲೆ ಬಂದು ಶೇಷಾಚಲದಿ ನಿಂದ । ಪುರಂದರವಿಠಲ ನಿನ್ನಯ ಚರಣವ ಕಂಡು ॥ ೭ ॥ ಶ್ರೀಃ ॥

## ೧೪೯. ರಾಗ ಕಾಂಬೋಧಿ, ಆದಿತಾಳ.

ನೆಚ್ಚದಿರು ಬೆಕ್ಕು ನೆವ ನೋಡುತ್ತಿದೆ । ಎಚ್ಚತ್ತಿರೆಚ್ಚತ್ತಿರೆಲೊ ರಾಮುಗ ॥ ॥ ಪಲ್ಲ ॥ ಒಂಬತ್ತು ಬಾಗಿಲ ಪಂಜರವನ್ನೈದಿದೆ । ಕಂಭವಿಲ್ಲ ಕದವು ಮೊದಲೆ ಇಲ್ಲ ॥ ಎಂಭತ್ತುಸಾವಿರ ಸಂದುಗಂಟಿನ ಗೂಡ । ನಂಬಿ ನೀ ಕೆಡದಿರೊ ಎಲೊ ರಾಮುಗ ॥ ೧ ॥ ಮುನಿವರು ಐವರು ಮೋಹಿಸುವರಾರು ಮಂದಿ । ಮನ ಕಾಕುಗೊಳಿಸುವರೆಂಟು ಮಂದಿ ॥ ಇನಿತು ತಿಳಿದು ಹಿಂದು ಮುಂದು ವಿಚಾರಿಸಿ । ಮನಮೆಚ್ಚಿ ಕೆಡದಿರೊ ಎಲೊ ರಾಮುಗ ॥ ೨ ॥ ಸತಿಸುತರಿಗೆ ಮತ್ತೆ ಹಿತರಿಗೆ ಬೇಕೆಂಬ । ಅತಿ ಲೋಭತನ ಬೇಡ ಎಲೊ ರಾಮುಗ ॥ ಕ್ಷಿತಿಸುರರೆಂಬ ಭೂಮಿಲಿ ಬಿತ್ತಿ ಮುಂದಣ । ಪಥಕೆ ಸಾಧನ (ಗಂಟನು) ಮಾಡಿಕೋ ರಾಮುಗ ॥ ೩ ॥ ಹೊನ್ನು ಹೆಣ್ಣು ಮಣ್ಣು ಎಂಬ ಮೋಹದೊಳಿದ್ದು । ಬಣ್ಣಗೆಡಲಿಬೇಡ ಎಲೊ ರಾಮುಗ ॥ ಸುಣ್ಣವ ಸುಡುವಂತೆ ಸುಡುತಿದೆ ಬೆಕ್ಕು ನಿನ್ನ । ಕಣ್ಣು ತೆರೆದೆಚ್ಚತ್ತಿರೆಲೊ ರಾಮುಗ ॥ ॥ ೪ ॥ ಸ್ಥಿರವೆಂದು ನೆಚ್ಚದಿರು ಈ ಪಂಜರವನು ನೀ । ಉರವಣಿಸುತ

ಬೆಕ್ಕ ಮೊರೆಯುತಲಿದೆ ॥ ಪರಮ ಕೃಪಾಳು ಶ್ರೀಪುರಂದರವಿಟ್ಠಲನ । ನೆರೆನಂಬಿ ಸುಖಿಯಾಗಿರೆಲೊ ರಾಮುಗ ॥ ೫ ॥ ಶ್ರೀಃ ॥

೧೫೦. ರಾಗ ಕಾಂಬೋಧಿ, ತಾಳ.

ಅಂಗನೆಯರೆಲ್ಲ ನೆರೆದು ಚಪ್ಪಾಳಿಕ್ಕುತ ದಿವ್ಯ । ಮಂಗಳ ನಾಮವ ಪಾಡಿ ರಂಗನ ಕುಣಿಸುವರು ॥ ಪಲ್ಲ ॥ ಪಾಡಿ ಮಲ್ಹಾರಿ ಭೈರವಿ ಸಾರಂಗಿ ದೇಶಿ । ಗುಂಡಕ್ರಿಯ ಗುಜ್ಜರಿ ಕಲ್ಯಾಣಿ ರಾಗದಿ ॥ ತಂಡತಂಡದಲಿ ನೆರೆದು ರಂಗನ ಉಡಿಯ ಘಂಟೆ । ಘಣ್ಘಣ್ಘಣ್ ಘಣರೆಂದು ಹಿಡಿದು ಕುಣಿಸುವರು ॥ ೧ ॥ ತಿತ್ತಿರಿ ಮೌಳಿ ತಾಳದಂಡಿಗೆ ಮದ್ದಲೆ । ಉತ್ತಮದ ಶಂಖ ಶಬ್ದ ನಾದಗಳಿಂದ ॥ ಸುತ್ತ ಮುತ್ತಿ ನಾರಿಯರು ತಥೈತಥೈಥಾ ಯೆಂದು । ಅರ್ಥಿಯಿಂದ ಕುಣಿಸುವರು ಪರವಸ್ತುವ ಹಿಡಿದು ॥ ೨ ॥ ಕಾಮಿನಿಯರೆಲ್ಲ ನೆರೆದು ಕಂದನಾಟಗಳನಾಡಿ । ಪ್ರೇಮದಿಂದ ಬಿಗಿಬಿಗಿ ದಪ್ಪಿ ಮುದ್ದಾಡಿ ॥ ಕಾಮಿತ ಫಲವೀವ ಭಕುತ ಜನರೊಡೆಯ । ಸ್ವಾಮಿ ಶ್ರೀಪುರಂದರವಿಟ್ಠಲರಾಯನ್ನ । ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೧೫೧. ರಾಗ ನಾದನಾಮಕ್ರಿಯೆ, ತಾಳ.

ಈಸಲಾರೆನೆ ಈ ಸಂಸಾರದಲಿ। ಲೇಸುಕಾಣೆನೆ ಇದರಲ್ಲಿ। ಹೇ ಸಖಿಯೆ ಕೇಳೆ ॥ ಪಲ್ಲ ॥ ಅತ್ತಿಗೆಯರು ಅತಿ ವ್ಯಭಿಚಾರಿಯರಮ್ಮ । ಎಡೆಬಿಡದೆ ಯೆನ್ನ । ಸುತ್ತಮುತ್ತ ಕಾದಿಹರೆ ನೋಡಮ್ಮ । ಅವರಂತೆ ಯೆನ್ನ । ಚಿತ್ತದಲಿ ತಿಳಿದಿಹರೆ ಕೇಳಮ್ಮ। ಇವರೆಲ್ಲರ ಹಮ್ಮು। ಒತ್ತಿ ಆಳುವರಿಲ್ಲೇ ದುಷ್ಕರ್ಮ । ಜೊತೆ ಹಾಕಿದ ಬ್ರಹ್ಮ ॥ ೧ ॥ ದುರುಳರಾರ್ವರು ಭಾವ ಮೈದುನರೆ । ಇನ್ನೆಂಟು ಮಂದಿ । ಕೊರಳ ಕೊಯ್ವ ಮಲಮಕ್ಕಳು ಇರುತಾರೆ। ಇನ್ನ್ಹತ್ತು ಮಂದಿ। ನೆರೆದು ಕೂಡಿ ಕರೆಕರೆಯ ಮಾಡುವರೆ। ನಾ ವಿವರಿಸಲಾರೆ । ಸಂಬಾರದ ವಗತನ ಹಗರಣವೆ। ಹೇ ಸಖಿಯೆ ಕೇಳೆ ॥ ೨ ॥ ಮಾವನೆಂಬುವನು ಮಾದಿಗನಂತಿಹನೆ । ನಾ ಮಾಡಲಿ

ನ್ನೇನೆ । ಝೂವಝೂವಕೆ ನೋವನು ನುಡಿಯುವನೆ । ಬಹು ತಾಮಸಿ ಕಾಣೆ । ತಾವು ಕದಲದೆ ಕುಳಿತಿಪ್ಪನು ಜಾಣೆ । ಬೈದರೆ ಫಲವೇನೆ । ಆವ ಬಗೆಯಲಿ ಎನಗೆ ಸುಖ ಕಾಣೆ । ಹೇ ಸಖಿಯೆ ಕೇಳೆ ॥ ೩ ॥ ಪತಿಯಾದರೆ ಪರದೇಶಿಯಂತಿಹನೆ । ಒಂದರೆಘಳಿಗಾದರು । ಜೊತೆಯಲ್ಲಿದ್ದು ಮಾತಾಡುವ ಸುಖ ಕಾಣೆ । ಇವರೆಲ್ಲರ ತಪ್ಪಿಸಿ । ಸುತರ ಪಡೆವ ಸುಖವಿಲ್ಲ ಸಿನ್ನಾಣೆ । ಮತಿದೋರದೆ ಎನಗೆ । ನುತಿಸುವೆ ಬೇಗದಿ ಪತಿಯೊಳು ನೀ ಪೇಳೆ । ಹೇ ಸಖಿಯೆ ಕೇಳೆ ॥ ೪ ॥ ಕೋಪವು ಬಹಳ ಕುಲಗೇಡಿ ಅತ್ತೆಗೆ । ನಾ ಮಾಡಲಿನ್ನೇನೆ । ಪಾಪಕ್ಕಂಜಳು ಪೂರ್ವೈಸಳು ಕೊನೆಗೆ । ಬಹು ಪಾಪಿ ಕಾಣೆ । ತಾಪಸರೆಂದರೆ ಆಗದು ಇವಳಿಗೆ । ಅವಿವೇಕಿ ಈಕೆ । ಶ್ರೀಪತಿ ಪುರಂದರವಿಠಲಗೆ ನೀ ಪೇಳೆ । ಹೇ ಸಖಿಯೆ ಕೇಳೆ ॥ ೫ ॥ ಶ್ರೀಃ ॥

## ೧೫೨. ಶ್ರೀರಾಗ, ಅಟತಾಳ.

ಎರಡೂ ಒಂದಾಗದು ರಂಗ ॥ ಪಲ್ಲ ॥ ಎರಡು ಒಂದಾಗದು ಎಂದೆಂದಿಗು ರಂಗ ॥ ಅನುಪಲ್ಲ ॥ ಒಂದು ವೃಕ್ಷದಲ್ಲಿ ಎರಡು ಪಕ್ಷಿಗಳು । ಒಂದೆ ಗೂಡಿನಲ್ಲಿ ಇರುತಿಹುವು ॥ ಒಂದು ಪಕ್ಷಿ ಫಲಗಳನುಂಬುದು ಮ । ತ್ತೊಂದು ಫಲಂಗಳನುಣ್ಣದು ರಂಗ ॥ ೧ ॥ ಹಲವು ಕೊಂಬೆಗೆ ಒಂದು ಹಾರಿತು ಒಂದು । ಹಲವು ಕೊಂಬೆಗೆ ಹಾರಲರಿಯದು ॥ ಹಲವನೆಲ್ಲ ಒಂದು ಬಲ್ಲುದು ಒಂದು । ಹಲವನೆಲ್ಲವ ಅರಿಯದು ರಂಗ ॥ ೨ ॥ ನೂರೆಂಟು ಕೊಂಬೆಗೆ ಹಾರಿತು ಅದು । ಹಾರಿ ಮೇಲಕ್ಕೇ ಮಾರಿತು ॥ ಮಾರಿ ಪುರಂದರವಿಟ್ಠಲ ನಿಮ್ಮನು । ಸೇರಿ ಸುಖಿಯಾಗಿ ನಿಂತಿತು ರಂಗ ॥ ೩ ॥

## ೧೫೪. ರಾಗ ನಾದನಾಮಕ್ರಿಯೆ, ಏಕತಾಳ.

ಜಂಗಮರು ನಾವು ಜಗದೊಳು ॥ ಪಲ್ಲ ॥ ಜಂಗಮರು ನಾವು ಲಿಂಗಾಂಗಿಗಳು । ಮಂಗಳವಂತರು ಭವಿಗಳೆಂತೆಂಬಿರಿ ॥ ಅನುಪಲ್ಲ ॥ ಹರಗುರು ದೈವ ಕೇಶವ ನಮ್ಮ ಮನೆದೈವ । ವರದ ಮೋಹನ ಗುರು ಶಾಂತೇಶ ॥ ಹರಗುರು ದ್ರೋಹ ಮಾಡಿದ ಪರವಾದಿಯು । ರೌರವ ನರಕದಿ ಮುಳು

ಗುವುದೆ ಸಿದ್ಧ ॥ ೧ ॥ ವಿಭೂತಿ ನಮಗುಂಟು ವಿಶ್ವೇಶ ನಮಗುಂಟು । ಶೋಭನ ನಾಮ ಮುದ್ರೆಗಳುಂಟು ॥ ಶ್ರೀಭಾಗಿರಥಿಯಗಣಿತ ಮಜ್ಜನ ವುಂಟು । ಸೌಭಾಗ್ಯವೀವ ಮಹಂತನ ಮಠದವರು ॥ ೨ ॥ ವಿರಕ್ತರು ನಾವು ಶೀಲವಂತರು ನಾವು । ವೀರಭದ್ರ ಪ್ರಿಯಭಕ್ತರು ನಾವು ॥ ಕಾರಣ ಕರ್ತ ಶ್ರೀಪುರಂದರವಿಠಲನ । ಕಾರುಣ್ಯಕೆ ಮುಖ್ಯ ಪಾತ್ರರು ನಾವು ॥ ೩ ॥

## ೧೫೪. ರಾಗ ತೋಡಿ, ಆದಿತಾಳ.

ಬಣ್ಣಿಸಲಳವೆ ನಿನ್ನ ವೆಂಕಟರನ್ನ ॥ ಪಲ್ಲ ॥ ಬಣ್ಣಿಸಲಳವೆ ಭಕ್ತವತ್ಸಲ ದೇವ । ಪನ್ನಂಗಶಯನ ಪಾಲ್ಗಡಲೊಡೆಯನೆ ದೇವ ॥ ಅನುಪಲ್ಲ ॥ ಅಸಮ ಸಾಹಸಿ ಸೋಮಕನೆಂಬ ದನುಜನು । ಶಶಿಧರನ್ವರದಿ ಶಕ್ರಾದ್ಯರಿ ಗಳುಕದೆ । ಬಿಸಜಸಂಭವನ ಠಕ್ಕಿಸಿ ನಿಗಮವ ಕದ್ದು । ವಿಷಧಿಯೊಳಡ ಗಿರಲಾಗ ಬಂದಮರರು ॥ ವಸುಧೀಶ ಕಾಯಬೇಕೆಂದೆನಲವನ ಮ । ರ್ದಿಸಿ ವೇದಾವಳಿಯ ತಂದು । ಮೆರೆದೆ ದಶ । ದಿಸೆಯೊಳು ಬ್ರಹ್ಮಗಂದು । ವೇದವ ಕರು । ಣಿಸಿದೆ ಕಂಜಾಕ್ಷ ಕೇಶವ ದಯಾಸಿಂಧು ॥ ೧ ॥ ಇಂದ್ರಾದಿ ಸಕಲ ದೇವತೆಗಳು ದೈತ್ಯ । ವೃಂದವೊಂದಾಗಿ ಮತ್ಸರವ ಮರೆದು ಕೂಡಿ । ಬಂದು ನೆರೆದು ಮುರಹರ ನಿನ್ನ ಮತದಿಂದ । ಮಂದ ರಾದ್ರಿಯ ಕಡಗೋಲ ಗೈದತುಳ ಫ ॥ ಣೀಂದ್ರನ ತನು ನೇಣಿನಂದದಿ ಬಂಧಿಸಿ । ಸಿಂಧು ಮಥಿಸುತಿರಲು । ಘನಾಚಲ । ವಂದು ಮುಳುಗಿ ಪೋಗಲು । ಬೆನ್ನಾಂತು ಮು । ಕುಂದನೆ ಸಲಹಿದೆ ಸುರರು ಪೊಗಳಲು ॥ ॥ ೨ ॥ ಖಳಶಿರೋಮಣಿ ಕನಕಾಕ್ಷನೆಂಬಸುರ ನಿ । ರ್ಮ್ಮಳು ಸೆಣೆಸುವೆ ನೆಂದು ತವಕದಿಂದಲಿ ಬಂದು । ಬಲದ ಕಡುಹಿನಿಂದಲಿ ಚೋರತನ ದಿಂದ । ಇಳೆಯ ಕದ್ದು ರಸಾತಳದೊಳಗಿರೆ ನಿನ್ನ ॥ ಪೊಳೆವ ಕೋರೆಗ ಳಿಂದ ತಿವಿದು ಕೊಂದವನ । ಪ್ಪಳಿಸಿ ದಿಂಡುಗೆಡಹಿ । ಬೇಗದಿ ಅವನ । ಬಲವ ಕೆಡಿಸಿ ಮಡುಹಿ । ಈ ಮಹೀ । ಲಲನೆಯ ಕೈಕೊಂಡೆ ಸುರರನ್ನು ಸಲಹೀ ॥ ೩ ॥ ಹಗಲಿರುಳಳಿವಿಲ್ಲ ಕನಕಕಶಿಪು ತನ್ನ । ಮಗನ ಹರಿಯ ತೋರೆಂದವನ ಬಾಧಿಸುತಿರೆ । ಚಿಗಿದು ಕಂಭವನೊಡೆದಧಿಕ ರೋಷಾಗ್ನಿ

ಕಾ । ಬೊರ್ಗೆ ಸೂಸಿ ಗಗನಮಂಡಲ ಧಗಧಗಧಗ ॥ ಧಗಿಸೆ ಪ್ರಜ್ವಾಲೆ ಯುಗುಳಿ ಹಿರಣ್ಯಕನ ಕೂ । ರುಗುರಿಂದೊಡಲ ಸೀಳಿ । ರಕ್ತವ ಚೆಲ್ಲಿ । ಬಗೆದು ಕರುಳಮಾಲೆ । ಧರಿಸಲು ನರ । ಮೃಗರೂಪ ತ್ರಾಹಿಯೆಂದನು ಶಶಿಮೌಳಿ ॥ ೪ ॥ ಕುಲಿಶಧರನ ಗೆದ್ದು ಕುವಲಯದಲಿ ಭುಜ । ಬಲ ವಿಕ್ರಮನು ಸೌಭಾಗ್ಯಗಳುನ್ನತಿಯಿಂದ । ಬಲು ವಾಜಿಮೇಧ ಗೈಯಲು ವಟುವೇಷವ । ತಳೆದು ತ್ರಿಪಾದ ಭೂಮಿಯ ದಾನವ ಬೇಡಿ । ಬಲಿಯ ಹಮ್ಮನು ಮುರಿಯಬೇಕೆಂದವನು ಕೊಟ್ಟ । ನೆಲನ ಈರಡಿ ಮಾಡಿದೆ । ಚರಣವನೆತ್ತಿ । ಜಲಜಜಾಂಡವನೊಡೆದೆ । ಉಂಗುಷ್ಟದಿ । ಸುಲಲಿತ ಸುಮನಸನದಿಯನ್ನು ಪಡೆದೆ ॥ ೫ ॥ ಪೊಡವಿಪರೊಳಗಗ್ಗಳಿಯ ಕಾರ್ತವೀರ್ಯ । ಕಡುಧೀರ ದೇವ ದೈತ್ಯರಿಗಂಜದವನ ಬೆಂ । ಬಿಡದೆ ಸಂಗ್ರಾಮದೊಳಧಿಕ ಸಮರ್ಥನ । ಹೊಡೆದು ತೋಳ್ಗಳ ಕುಟ್ಟಿ ಕೆಡಹಿದಾಗಸದಳ ॥ ಮೃಡ ಮುಖ್ಯ ದೇವಸಂತತಿ ನೋಡೆ ಕ್ಷತ್ರೇಶ । ಪಡೆಯ ನೆಲಕೆ ಸವರಿ । ಮಾತೆಯ ತಲೆ । ಕಡಿದು ತತ್ಪತಿಗೆ ತೋರಿ । ಪಿಡಿದೆ ಗಂಡು । ಗೊಡಲಿಯ ಕರದಲಿ ಬಿರುದ ಘನ ಶೌರಿ ॥ ೬ ॥ ದಶರಥರಾಜ ಕೌಸಲ್ಯರ ಮಗನಾಗಿ । ಋಷಿ ವಿಶ್ವಾಮಿತ್ರನಧ್ವರವ ರಕ್ಷಿಸಿ ಘನ । ವಿಷಕಂಠ ಧನುವ ಖಂಡಿಸಿ ಜಾನಕಿಯ ತಂದು । ತ್ರಿಶಿರ ದೂಷಣ ಖರರಳಿದು ವಾಲಿಯನೊಂದು ॥ ನಿಶಿತ ಶಸ್ತ್ರದಿ ಸಂಹರಿಸಿ ಸಾಗರವ ಬಂ । ಧಿಸಿ ಲಂಕೆಯ ದಹಿಸಿ । ರಾವಣ ರಕ್ಕಸನನ್ನು ಕತ್ತರಿಸಿ । ವಿಭೀಷಣ । ಗೊಸೆದು ಪಟ್ಟವಗಟ್ಟಿ ಮೆರೆದೆಯೊ ಸಾಹಸಿ ॥ ೭ ॥ ದೇವಕಿ ವಸುದೇವರಲಿ ಜನಿಸಿ ಲೋಕ । ಪಾವನಗೈದು ಪನ್ನಗನ ಹೆಡೆಯ ಮೆಟ್ಟಿ । ಗೋವಳರ ಸಲಹಿ ಗೋವರ್ಧನಗಿರಿಯೆತ್ತಿ । ಮಾವ ಕಂಸನ ಕೊಂದು ಮಲ್ಲರ ಮರ್ದಿಸಿ ಸತ್ಯ ॥ ಭಾಮೆಗೆ ಸುರತರುವನು ಕಿತ್ತು ತಂದಿತ್ತ । ತಾವರೆದಳ ಸುನೇತ್ರ । ತ್ರಿಭುವನ । ಪಾವನ ಚರಿತ್ರ । ಶ್ರೀರುಗ್ಮಿಣಿ । ದೇವಿ ಮನೋಹರ ಸುಲಲಿತ ಗಾತ್ರ ॥ ೮ ॥ ದುರುಳ ದಾನವರುಗಳಂದು ಖೇಚರದೊಳು । ಹರಿಹರ ಬ್ರಹ್ಮಾದಿಗಳಿಗಳವಡದೆ ಮು । ಪ್ಪುರವ ರಚಿಸಿ ಮೂರು ಜಗಕುಪಹತಿ ಮಾಡು । ತಿರೆ ಅನುಪಮ ರೂಪದಿ ನಿಂದು ದೈತ್ಯ ಸ್ತ್ರೀ ॥ ಯರ

ಪಾತಿವ್ರತ್ಯವ ಭಂಗವ ಮಾಡಿ ಮು । ಪ್ಪುರವನಳಿದ ನಿಸ್ಸೀಮ । ಅಖಿಳ ಶ್ರುತಿ । ಯರಸಿ ಕಾಣದ ಮಹಿಮ । ಸಾಮಜರಾಜ । ವರದ ಸುಪರ್ಣ ವಾಹನ ಸಾರ್ವಭೌಮ ॥ ೯ ॥ ಮಣಿಮಯ ಖಚಿತಾಭರಣದಿಂದೆಸೆವ ಲ । ಕ್ಷಣವುಳ್ಳ ದಿವ್ಯ ವಾಜಿಯನೇರಿ ರಣದೊಳು । ಕುಣಿವ ಮೀಸೆ ಕೋರೆ ದಾಡೆ ಭೀಕರ ಘೋರ । ಬಣಗು ದೈತ್ಯರ ತಲೆ ಕಡಿದು ಎಸೆವ ಭೂತ ॥ ಗಣಕಾಹುತಿಯಿತ್ತು ಭೂಭಾರವಿಳುಹಿದೆ । ರಣಭಯಂಕರ ಪ್ರಚಂಡ । ಮೂರ್ಜಗದೊಳ । ಗೆಣೆಗಾಣೆ ನಿನಗುದ್ದಂಡ । ಕಲ್ಕಿ ದಿನ । ಮಣಿ ಕೋಟಿತೇಜ ದುಷ್ಕೃತ ಕುಲಖಂಡ ॥ ೧೦ ॥ ಚಿತ್ತಜನಯ್ಯನೆ ಚಿನುಮಯರೂಪ ದೇ । ವೋತ್ತಮ ವರ ಶಂಖಚಕ್ರ ಗದಾಂಬುಜ । ಉತ್ತಮಾಂಗದ ಮಣಿ ಮಕುಟ ಕುಂಡಲ ಪ್ರಭೆ । ವ್ಯಕ್ತ ಕೌಸ್ತುಭ ಪೀತಾಂಬರ ಕಟಿಸೂತ್ರ ಶ್ರೀ ॥ ವತ್ಸಲಾಂಛನ ಕೇಯೂರ ಕಂಕಣಭೂಷ । ನಿತ್ಯ ವೈಕುಂಠವಾಸ । ನಾಗಿಹ ಪುರು । ಷೋತ್ತಮ ಶ್ರೀನಿವಾಸ । ಪುರಂದರವಿಠಲ ತಿರುಮಲೇಶ ಪಾಹಿ ಸರ್ವೇಶಾ ॥ ೧೧ ॥ ಶ್ರೀಃ ॥

೧೫೫. ರಾಗ ಮಧ್ಯಮಾವತಿ, ತಾಳ.

ಮನವೆ ಚಂಚಲಮತಿಯ ಬಿಡು ॥ ಪಲ್ಲ ॥ ನಮ್ಮ । ವನಜನಾಭನ ಭಜನೆಯ ಮಾಡು ॥ ಅನುಪಲ್ಲ ॥ ಬಡಮನುಜಗೆ ಬಾಯಬಿಡುತ ದೈನ್ಯ ದಲವನ । ಅಡಿಗಳಿಗೆರಗಲು ಪಡೆವುದೇನೊ ॥ ಕಡಲಶಯನ ಜಗದೊಡೆ ಯನ ನೆನೆಯೆ ಕೈ । ಪಿಡಿದು ಸಲಹುವನು ಬಿಡದಲೆ ಅನುಗಾಲ ॥ ೧ ॥ ಬಲ್ಲಿದ ಭಜಕರ ಬಲ್ಲವ ಬಲುಸಿರಿ । ಉಳ್ಳನು ಕರುಣಿಯು ನಲ್ಲನಿರೆ ॥ ಕ್ಷುಲ್ಲಕರನು ಕಾಯೆ ಸಲ್ಲದೆಂದೆಂದಿಗು । ನಿಲ್ಲು ಹರಿಯ ಪಾದದಲ್ಲಿ ತಲ್ಲ ಣಿಸದೆ ॥ ೨ ॥ ಮುಗಿಲು ಮೇಲೆಗೆಡೆ ಅಗಣಿತ ಆಪ । ತ್ತುಗಳು ಬಂದಡ ರಲು ನಗುತಲಿರು ॥ ಜಗದುದರನ ಮಹಿಮೆಗೆ ನಮೊ ನಮೋ ಎಂದು । ಪೊಗಳುತ್ತ ಬಾಳಘಗಳನು ಗಣಿಸದಲೆ ॥ ೩ ॥ ಆವಾವ ಕಾಲಕ್ಕೆ ದೇವ ನಿಚ್ಛೆಯಿಂದ । ಆವಾವದು ಬರೆ ಸುಖವೆ ಎನ್ನು ॥ ಶ್ರೀವರ ಅನಾದಿ ಜೀವರ ಕ್ಲುಪ್ತದಂತೆ । ಈವನು ನಿಜಸ್ವಭಾವ ಬಿಡದೆ ನಿತ್ಯ ॥ ೪ ॥ ಕೇಶ ವಾಚ್ಯುತ ಶ್ರೀನಿವಾಸ ಮುರಾರೆ । ದೋಷರಹಿತ ಕ್ಲೇಶನಾಶನನೆಂದು ॥

ಮೋಸಗೊಳಿಪ ಭವಪಾಶವ ಖಂಡಿಪ । ಶ್ರೀಶ ಪುರಂದರವಿಠಲನು ಜಗಕಿರಿ ॥ ೫ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೧೫೬. ರಾಗ ರೇಗುಪ್ತಿ, ಅಟತಾಳ.

ಯಾಕೆ ಕಡೆಗಣ್ಣಿಂದ ನೋಡುವೆ । ಕೃಷ್ಣ । ನೀ ಕರುಣಾಕರನಲ್ಲವೆ ॥ ॥ ಪಲ್ಲ ॥ ಭಕ್ತವತ್ಸಲ ನೀನಲ್ಲವೆ । ಕೃಷ್ಣ । ಚಿತ್ಸುಖದಾತ ನೀನಲ್ಲವೆ ॥ ಅತ್ಯಂತ ಅಪರಾಧಿ ನಾನಾದಡೇನಯ್ಯ । ಇತ್ತಿತ್ತ ಬಾಯೆನ್ನಬಾರದೆ ರಂಗ ॥ ೧ ॥ ಇಂದಿರೆಯರಸ ನೀನಲ್ಲವೆ । ಬಹು । ಸೌಂದರ್ಯನಿಧಿ ನೀನಲ್ಲವೆ ॥ ಮಂದಮತಿ ನಾನಾದಡೇನು ಕೃಪಾ । ಸಿಂಧು ನೀ ರಕ್ಷಿಸ ಬಾರದೆ ರಂಗ ॥ ೨ ॥ ದೋಷಿಯು ನಾನಾದಡೇನಯ್ಯ । ಸರ್ವ । ದೋಷ ರಹಿತ ನೀನಲ್ಲವೆ ॥ ಘಾಸಿ ಯಾತಕೆ ನಿನ್ನ ನಂಬಿದೆ ಸಲಹಯ್ಯ । ಶೇಷ ಶಾಯಿ ಶ್ರೀಪುರಂದರವಿಠಲ ॥ ೩ ॥ ಶ್ರೀಃ ॥

೧೫೭. ರಾಗ ಕಲ್ಯಾಣಿ, ಅಟತಾಳ.

ಸಲ್ಲದೊ ಕೃಷ್ಣ ಸಲ್ಲದೋ ॥ ಪಲ್ಲ ॥ ಸಿರಿ । ವಲ್ಲಭ ಇದ ನೋಡಿ ಪಾಲಿಸ ಬೇಕೊ ॥ ಅನುಪಲ್ಲ ॥ ಬಿತ್ತಿ ಬೆಳೆಸಿ ತಲೆಯೆತ್ತಿದ ಪೈರನ್ನು । ಮತ್ತೆ ತುರುವಿಂಡು ಬಿಟ್ಟು ಮೆಲ್ಲಿಸುವುದು ॥ ೧ ॥ ಸಾವಿರ ಹೊನ್ನಿಕ್ಕಿ ಸದನವ ಸಾಧಿಸಿ । ಪಾವಕನುರಿಗೆ ನೀನೊಪ್ಪಿಸಿ ಕೊಡುವುದು ॥ ೨ ॥ ಕುಶಲದಿ ಬಣ್ಣಿಸಿ ಬರೆದು ಚಿತ್ತಾರವ । ಮಸಿ ಮಣ್ಣು ಮಾಡಿ ನೀ ಕೆಡಿಸುವುದು ॥ ॥ ೩ ॥ ಬಲು ಕಾಲ ಮುದ್ದಿಸಿ ಕಲಿಸಿ ಮಾತುಗಳ । ಗಿಳಿಯ ಸಾಕಿ ಬಾವು ಗಗೆ ಒಪ್ಪಿಸುವುದು ॥ ೪ ॥ ಕರುಣಿಸು ಗುರು ಪುರಂದರವಿಟ್ಠಲ ನಮ್ಮ । ಹಿರಿದು ಮಾಡಿ ಮತ್ತೆ ಕಿರಿದು ಮಾಡುವುದು ॥ ೫ ॥ ಶ್ರೀಃ ॥

೧೫೮. ರಾಗ ಕಲ್ಯಾಣಿ, ಅಟತಾಳ.

ಲಗ್ಗೆಯೋ ವೈಕುಂಠ ಲಗ್ಗೆಯೋ ॥ ಪಲ್ಲ ॥ ಒಗ್ಗಿಲಿ ಶ್ರೀಹರಿಯೊಡನಾಡೊ ಸುಜನರ್ಗೆ ॥ ಅನುಪಲ್ಲ ॥ ಸಂಸಾರವೆಂಬೋದು ಸದರವಲ್ಲವೆಂದು । ಸಂಶ

ಯವೆಂಬೋದು ಇಸಿತಿಲ್ಲದೆ ॥ ಹಂಸನ ತನ್ನ ಮನೆಯೊಳು ನೇಮಿಸಿ। ಕಂಸಾರಿಯೆಡೆಯೊಳು ಕಡುಸ್ನೇಹವಮಾಳ್ಪಗೆ ॥ ೧ ॥ ಮಾಯಾಪಾಶವ ಕಳೆದು ಮದಮತ್ಸರವಳಿದು । ಕಾಯವು ಸ್ಥಿರವಲ್ಲವೆಂದು ತಿಳಿದು ॥ ನ್ಯಾಯ ವಿಚಾರದೆ ಅನ್ಯಾಯಕ್ಕೆ ಸೇರದೆ। ಕಾಯಜಪಿತನೊಳು ಕಡು ಸ್ನೇಹವಮಾಳ್ಪಗೆ ॥ ೨ ॥ ಭ್ರೂಮಧ್ಯದೆಡೆಯೊಳು ನಾಸಿಕಾಗ್ರದೊಳು । ನೇಮದಿಂದ ದೃಷ್ಟಿಯ ನಿಲ್ಲಿಸಿ ॥ ಪ್ರೇಮದಿ ಪುರಂದರವಿಠಲನ ಭಜಿಸುತ। ಭೂಮಿಯೊಳಿಹ ಬುದ್ಧಿವಂತ ಮನುಜರಿಗೆ ॥ ೩ ॥ ಶ್ರೀಃ ॥

೧೫೯. ರಾಗ ಕಾಂಬೋಧಿ, ಆದಿತಾಳ.

ರಂಗ ಬಂದ ಮನೆಗೆ ಶೃಂಗಾರ ನೋಡಿರೊ । ಹಿಂಗದಂಥ ಬಡತನ ಭಂಗವಾಗಿ ಹೋಯಿತೊ ॥ ಪಲ್ಲ ॥ ಹೊತ್ತಾರೆದ್ದು ಹೋಗಿ ಪರರ ಭೃತ್ಯ ನಾಗಿ ದುಡಿದರೆ । ತುತ್ತು ಅನ್ನ ಕಾಣದೆ ನಾ ಹೊತ್ತು ಕಳೆದೆನೊ ॥ ಇತ್ತಲಾಗಿ ರಂಗ ಬರಲು ಸುತ್ತಿಕೊಂಡ ಬಡತನ । ಎತ್ತಲ್ಹೋಯಿತೊ ಏನಾಯಿತೊ ಕಾಣಬಾರದು ॥ ೧ ॥ ಮಾನಾಭಿಮಾನವ ಬಿಟ್ಟು ನಾನಾ ರಣ್ಯ ತಿರುಗಿದರೆ। ಗೇಣು ಅರಿವೆ ಉಟ್ಟೇನೆನಲು ಹುಟ್ಟು ದೊರೆಯದು ॥ ದಾನವಾಂತಕ ರಂಗ ಬರಲು ನಾನಾ ಪರಿ ಪಟವಾಳಿ। ತಾನೆ ಬಂದು ಮನೆಯೊಳು ನಿಧಾನವಾಯಿತೊ ॥ ೨ ॥ ಹುಟ್ಟಿದ್ದು ಮೊದಲು ನಾನು ಮೆಟ್ಟಿ ತುಳಿದೆ ದೇಶವೆಲ್ಲ । ಇಟ್ಟೇನೆಂದರೆ ಸೊಟ್ಟಕಿವಿಗೆ ಘಟ್ಟಿಮುರುವು ಕಾಣೆನೊ ॥ ವಿಟ್ಠಲ ಮನೆಗೆ ಬರಲು ಸೃಷ್ಟಿಯೊಳಗಿಲ್ಲದಂಥ । ಅಷ್ಟ ಸೌಭಾಗ್ಯಗಳ ಮೆಟ್ಟಿ ತುಳಿದೆನೊ ॥ ೩ ॥ ಹಿಂಡು ಬಂಧು ಬಳಗದೊಳು ಖಂಡ ಮಣ್ಣು ಮಾಡಿದರೆ। ದಿಂಡೆಯಳೊಬ್ಬಳ ತಂದು ದಂಡೆ ಕಟ್ಟಿರೊ॥ ಪುಂಡರೀಕಾಕ್ಷನು ಬರಲು ಭೂಮಂಡಲದೊಳಿಲ್ಲದಂಥ। ಹೆಂಡರ ಭೋಗಕ್ಕೆ ಪ್ರಚಂಡನಾದೆನೊ ॥ ೪ ॥ ಹಿಂದೆ ರಂಗನ ಭಜಿಸದೆ ಅನೇಕ ಭಂಗವ ಪಟ್ಟೆ । ಮುಂದೆ ರಂಗನ ಭಜಿಸಲು ಸುಕೃತ ಫಲವು ॥ ತಂದೆ ಪುರಂದರ ವಿಟ್ಠಲನ್ನ ಹೊಂದಿ ಭಜಿಸಲಾಗಿ। ಬಂದನು ಭಾಗ್ಯದ ಸಿರಿ ಲಕುಮಿಯ ನೊಡಗೂಡಿ ॥ ೫ ॥ ಶ್ರೀಃ ॥

## ೧೬೦. ರಾಗ ಕಾಂಬೋಧಿ, ಝಂಪೆತಾಳ.

ಸುಮ್ಮನಿರು ಸುಮ್ಮನಿರು ಬೇಡಿಕೊಂಬೆ ॥ ಪಲ್ಲ ॥ ಈ ಮಹಿಯೊಳತಿಶಯದ ಗುಮ್ಮ ಬಂದಿದಕೋ ॥ ಅನುಪಲ್ಲ ॥ ಐದು ಮುಖ ಮತ್ತೆ ಮೂರೈದು ಕಣ್ಣುಗಳಿಂದ । ಐದು ಮುಖದೊಳಗ್ನಿ ಕಿಡಿ ಉದುರಿಸಿ ॥ ಐದೆರಡು ತೋಳುಗಳ ನೀಡಿ ಒಲಿದಾಡಿಸುತ । ಐದುಬಾಣನ ಗೆದ್ದ ಗುಮ್ಮ ಬಂದಿದಕೋ ॥ ೧ ॥ ಬಾಲಚಂದ್ರನ ಪೊತ್ತುಕೊಂಡು ತ್ರಿಶೂಲದ । ಮೇಲೆ ಹೆಣಗಳ ಚುಚ್ಚಿ ಒಲಿದಾಡುತ ॥ ಕಾಲಭೈರವನ ಕಾವಲನಿರಿಸಿ ಮರುಳುಗಳ । ಓಲಗದಿ ತಲೆಬಾಗಿಲಲಿ ಬಂದನಿದಕೋ ॥ ೨ ॥ ಮುದಿ ಎತ್ತನೇರಿ ಮೈಯೊಳು ಬೂದಿಯನು ಪೂಸಿ । ಮದನಾರಿಯೆಂಬಂಥ ಬಲು ಭೂತವು ॥ ಹೃದಯದಲಿ ನಿನ್ನ ನೋಡುವೆನೆಂಬ ಧ್ಯಾನದಲಿ । ಒದಗಿ ಬಂದೈದಾನೆ ಪುರಂದರವಿಠಲ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೬೧. ರಾಗ ಸೌರಾಷ್ಟ್ರ, ಅಟತಾಳ.

ಹರಿಪಾದವಿರಲಿಕ್ಕೆ ಪರದೈವಂಗಳ । ಗೆರಗಲೇಕೆ ॥ ಪಲ್ಲ ॥ ವರಮಾಣಿಕವಿದ್ದು ಎರವಿನ ಒಡವೆಯ । ಬಯಸಲೇಕೆ ॥ ಅನುಪಲ್ಲ ॥ ಪೆತ್ತ ಪಿತನ ಮಾತು ಕಿವಿಯಲಿ ಕೇಳದ । ಪುತ್ರನೇಕೆ । ಚಿತ್ತ ಪಲ್ಲಟವಾಗಿ ತಿರುಗುವ ಸತಿಯಳ । ಸಂಗವೇಕೆ ॥ ಉತ್ತಮ ಗುರುವನು ನಿಂದನೆ ಮಾಡುವ । ಶಿಷ್ಯನೇಕೆ । ಶಕ್ತಿಹೀನನಾಗಿ ಸರ್ವಜನರ ಕೂಡೆ । ಕ್ರೋಧವೇಕೆ ॥ ೧ ॥ ಭಾಷೆಯ ಕೊಟ್ಟು ತಪ್ಪುವ ಪ್ರಭುವಿನೊ । ಳಾಸೆಯೇಕೆ । ಕಾಸಿಗೆ ಕಷ್ಟವಾಡುವ ಲೋಭಿಯ । ಗೆಳೆತನವೇಕೆ ॥ ವೇಶ್ಯೆಯ ನೆಚ್ಚಿ ತನ ನಾರಿಯ ಬಿಡುವಂಥ । ಪುರುಷನೇಕೆ । ಹಾಸಿಕೆ ಅರಿತು ಕಾಲನೀಡಲರಿಯದ । ಮನುಜನೇಕೆ ॥ ೨ ॥ ಚೆನ್ನಾಗಿ ಬಾಳ್ದು ಪುಣ್ಯವ ಮಾಡದ । ಮನುಜನೇಕೆ । ಸನ್ನುತ ವಿದ್ಯವ ಮೆಚ್ಚಲರಿಯದ । ಅರಸನೇಕೆ ॥ ಅನ್ನವನಿಟ್ಟು ಹಂಗಿಸುತಿರುವರ । ಬಾಳದೇಕೆ । ಉನ್ನಂತ ಪುರಂದರವಿಠಲನ ನೆನೆಯದ । ಜನುಮವೇಕೆ ॥ ೩ ॥ ಶ್ರೀಃ ॥

## ೧೬೨. ರಾಗ ನಾದನಾಮಕ್ರಿಯೆ, ಆದಿತಾಳ.

ಇದರಿಂದೇನು ಫಲ ಇದರಿಂದೇನು ಫಲ । ನಮ್ಮ । ಪುರಂದರವಿಠಲನ ನಾಮವ ನೆನೆಯದೆ ॥ ಪಲ್ಲ ॥ ಹೃದಯಕಮಲವನು ತೊಳೆಯಲಾರದೆ ವ್ಯರ್ಥ । ಉದಯಾಸ್ತಮಾನ ನೀರೊಳು ಮುಳುಗುವರು ॥ ಅದಕಿಂತ ಸರ್ಪದ ನೀರೊಳಗಿರುತಿಪ್ಪ । ಮುದಿಕಪ್ಪೆ ಮಾಡಿದ ತಪ್ಪೇನಯ್ಯ ॥ ೧ ॥ ಹಲವು ಕಾಲ ಕಲ್ಲು ನೀರೊಳಗಿದ್ದರೇನು । ಬಲು ನೆನೆದಮೃತ ಶಿಲೆಯಾಗುವುದೆ ॥ ಕರದಲಿ ಜಪಮಾಲೆ ಮಣಿಗಳನೆಣಿಸುತ । ಪರನಿಂದೆ ಬಾಯಲಿ ಮಾಡುವರಯ್ಯ ॥ ೨ ॥ ಸ್ನಾನವ ಮಾಡುವರು ಆಸನ ಹಾಕುವರು । ಮೌನದಿ ಚಪ್ಪಾಳಿಟ್ಟು ಹಕ್ಕಿ ಬೆದರುವಂತೆ ॥ ಕಣ್ಣನ್ನು ಮುಚ್ಚುವರು ಮೂಗನ್ನೆ ಹಿಡಿವರು । ಚೆನ್ನಾಗಿ ಮನವ ನಿಲ್ಲಿಸಲರಿಯರು ವ್ಯರ್ಥ ॥ ೩ ॥ ನೇಮವನು ತಾಳುವರು ದಾನವ ಮಾಡುವರು । ಕಾಮಕ್ರೋಧ ಮದ ಮತ್ಸರ ಬಿಡದೆ ಇಂಥಾ । ನಾಯಿಕುನ್ನಿಗಳ ಕಂಡೊಳಗಿಟ್ಟುಕೊಂಡರೆ । ಕಾಶಿಯಲಿ ಮುಳುಗಿದ ಫಲವೇನಯ್ಯ ॥ ೪ ॥ ಮೂರು ಜೋಡಿ ವನಮಾಲೆಯು ಕೊರಳೊಳು । ಜೋಗಿಣಿಯ ಕವಡೆಯ ಸರದಂತೆ ॥ ಮೂರಾರು ಪುರಾಣ ತಿರುವಿ ಹಾಕುವರು । ಮಾರಪಿತನ ಮನಮುಟ್ಟಿ ಭಜಿಸದೆ ವ್ಯರ್ಥ ॥ ೫ ॥ ಹಸಿವಾಯಿತೇಳು ದೇವರ ತೊಳೆಯೆಂಬರು । ಹಸನಾಗಿ ಮನಮುಟ್ಟಿ ಪೂಜಿಸರು ॥ ಹೊಸ ಹೂವಿನಬುಟ್ಟಿಯಂತೆ ಮುಂದಿಟ್ಟುಕೊಂಡು । ವಸುಧೆಯೊಳ್ಳಾರುತಿ ಆಟವಾಡುವರು ॥ ೬ ॥ ಪರಧನ ಪರಸತಿ ಪರನಿಂದೆಗಳುಕುತ । ತೊರೆಯೊಳು ಮಿಂದರೆ ದುರಿತ ಪೋಗುವುದೆ ॥ ಸರುವವ ತೊರೆದು ಹರಿಯ ಧ್ಯಾನಮಾಡಲು । ವರವ ಕೊಡುವ ನಮ್ಮ ಪುರಂದರವಿಠಲ ॥ ೭ ॥ ಶ್ರೀಃ ॥

## ೧೬೩. ರಾಗ ನಾಟಕುರಂಜಿ (ಕಮಾಚು), ಅಟತಾಳ.

ಅಲ್ಲಿ ನೋಡಲು ರಾಮ ಇಲ್ಲಿ ನೋಡಲು ರಾಮ । ಎಲ್ಲೆಲ್ಲಿ ನೋಡಿದರಲ್ಲಿ ರಾಮ ॥ ಪಲ್ಲ ॥ ರಾವಣನ ಮೂಲಬಲ ಕಂಡು ಕಪಿಸೇನೆ । ಆವಾಗಲೆ ಬೆದರಿ ಓಡಿದವು ॥ ಈವೇಳೆ ನರನಾಗಿ ಇರಬಾರದೆಂದೆಣಿಸಿ । ದೇವ

ರಾಮಚಂದ್ರ ಜಗವೆಲ್ಲ ತಾನಾದ ॥ ೧ ॥ ಅವನಿಗೆ ಇವ ರಾಮ ಇವನಿಗೆ ಅವ ರಾಮ । ಅವನಿಯೊಳೀಪರಿ ರೂಪವುಂಟೆ ॥ ಲವಮಾತ್ರದಿ ಅಸುರ ದುರುಳರೆಲ್ಲರು । ಅವರವರ್ಹೊಡೆದಾಡಿ ಹತರಾಗಿ ಪೋದರು ॥ ೨ ॥ ಹನುಮದಾದಿ ಸಾಧುಜನರು ಅಪ್ಪಿಕೊಂಡು । ಕುಣಿಕುಣಿದಾಡಿದರು ಹರುಷದಿಂದ ॥ ಕ್ಷಣದಲ್ಲಿ ಪುರಂದರವಿಟ್ಠಲರಾಯನು । ಕೊನೆಗೊಡೆಯನು ತಾನೊಬ್ಬನಾಗಿ ನಿಂತ ॥ ೩ ॥ ಶ್ರೀಃ ॥

### ೧೬೪. ರಾಗ ಕಾಂಬೋಧಿ, ಝಂಪೆತಾಳ.

ಶ್ರೀವನಾವನಿಗಾದ ಅವನಿಯೊಳಗೆ ॥ ಪಲ್ಲ ॥ ಸರ್ವಜೀವರಿಗೆ ಶ್ರೀಹರಿಯಲ್ಲದೆ ಕೃಷ್ಣ ॥ ಅನುಪಲ್ಲ ॥ ಆವ ತಂದೆಯು ಸಲಹಿದನು ಪ್ರಹ್ಲಾದನ । ಆವ ತಾಯಿಯು ಸಲಹಿದಳು ಧ್ರುವನ ॥ ಆವ ಸಹೋದರನು ಈಡೇರಿಸಿದ ವಿಭೀಷಣನ । ಸರ್ವಜೀವರಿಗೆ ಶ್ರೀಹರಿಯಲ್ಲದೆ ಕೃಷ್ಣ ॥ ೧ ॥ ಆವ ಬಾಂಧವ ಕಾಯ್ದನಂದು ಕರಿರಾಜನ । ಆವ ಪತಿ ಕಾಯ್ದ ದ್ರೌಪದಿ ಮಾನವ ॥ ಆವ ಸಖನಾದ ಪಾಂಡವರ ಆಪತ್ತಿಗೆ । ಸರ್ವಜೀವರಿಗೆ ಶ್ರೀಹರಿಯಲ್ಲದೆ ಕೃಷ್ಣ ॥ ೨ ॥ ಆವನಾಧಾರ ಅಡವಿಯೊಳಿರುವ ಮೃಗಗಳಿಗೆ । ಆವನಾಶ್ರಯ ಪಕ್ಷಿಜಾತಿಗಳಿಗೆ ॥ ಆವ ಪೋಷಕನು ಗರ್ಭದಲಿದ್ದ ಶಿಶುಗಳಿಗೆ । ದೇವ ಗುರುಪುರಂದರವಿಠಲನಲ್ಲದೆ ಕೃಷ್ಣ ॥ ೩ ॥

### ೧೬೫. ರಾಗ ಕಲ್ಯಾಣಿ, ಅಟತಾಳ.

ಕೂಡಿ ಆಡಲೊಲ್ಲರೇ । ಅಮ್ಮಯ್ಯ ಎನ್ನ ॥ ಪಲ್ಲ ॥ ಕೇಡಿಗನಿವ ಕೊಲ್ಲುವನೆಂತೆಂದೆನ್ನ ॥ ಅನುಪಲ್ಲ ॥ ಹಸಿದಳುತಿರೆ ಮೊಲೆಯೂಡಬಂದಸುರೆಯ । ಅಸುವ ಹೀರಿದ ಮಾರಿ ಶಿಶುವೆಂತೆಂದೆನ್ನ ॥ ೧ ॥ ತನ್ನ ತಾಯಿಯ ಒಡಹುಟ್ಟಿದ ಅಣ್ಣನ । ಕೊಂದನಿವನನ್ಯರ ಬಿಡುವನೆ ಎಂದೆನ್ನ ॥ ೨ ॥ ಮಕ್ಕಳೊಳಗೆ ಬಲು ಹೆಚ್ಚಿದ ಬಲವಂತ । ಸಿಕ್ಕಿದ ಪುರಂದರವಿಠಲನೆಂತೆಂದೆನ್ನ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

### ೧೬೬. ರಾಗ ಮುಖಾರಿ, ಅಟತಾಳ.

ತೊಳಲದಿರು ಕಂಡ ಕಡೆಗೆ। ಪರಮಾತ್ಮ। ನೊಳ ಕಂಡು ಸುಖಿಸೊ ಮನವೆ ॥ ಪಲ್ಲ ॥ ಲಿಪಿಯೊಳಖಿಳವ ಚಿಂತಿಸಿ ಕಡೆಕಡೆಗೆ। ಕಪಿಯಂತೆ ಎಡೆಯಾಡದೆ ಮನವೆ। ಗುಪಿತದೊಳಗಿದ್ದಾತ್ಮನ ಧ್ಯಾನಿಸಲು। ಅಪರಿಮಿತ ಸುಖಸುಖಿಸುವೆ ಮನವೆ ॥ ೧ ॥ ನಾಗ ನರ ಸುರಲೋಕವ ತಿರುತಿರುಗಿ। ಕಾಗೆಯಂತೆಡೆಯಾಡದೆ ॥ ರಾಗದ್ವೇಷವ ತೊಲಗಿಸಿ ಮನದಿ ಮಧು। ಸೂದನನ ಕಾಣು ಕಂಡ್ಯ ಮನವೆ ॥ ೨ ॥ ಪರರಿಗಿದ ಸೂಚಿಸದಿರೊ ಸಿದ್ಧಾಂತ। ಪರಮ ತತ್ವವನು ತಿಳಿದು ಮನವೆ॥ ಗುರುಪುರಂದರವಿಠಲನ ಸ್ಮರಿಸಲು। ಸ್ಥಿರವುಳ್ಳ ಮುಕುತಿಯಹುದೊ ಮನವೆ ॥ ೩ ॥

### ೧೬೭. ರಾಗ ಪಂತುವರಾಳಿ, ಅಟತಾಳ.

ನಿನ್ನ ನಾಮವಿದ್ದರೆ ಸಾಕೊ ॥ ಪಲ್ಲ ॥ ಮುನಿದರೆ ಮುನಿ ನಿನ್ನಾಣೆ ಶ್ರೀರಾಮಾ ॥ ಅನುಪಲ್ಲ॥ ಹೊದ್ದಿದ ಪಾಪವನೆಲ್ಲ। ಛಿನ್ನ। ಛಿದ್ರವ ಮಾಡಿ ಖಂಡಿಸಿ ಬಿಡುವ ॥ ಎದ್ದರೆ ಸಂಗಡ ಬರುವ। ಎನ್ನ। ಮುದ್ದಿಸಿ ಮುಂದಕೆ ಮುಕ್ತಿಯ ಕೊಡುವ ॥ ೧ ॥ ಸಾರೆ ಸಂಗಡ ಬರುವ। ಎನ್ನ। ಸೇರಿದ ಪಾಪವ ಕೋಪದಿ ತರಿವ॥ ಝಾಡಿಸಿ ಕರ್ಮವ ಕಳೆವ। ಎನ್ನ। ಕೂಡಿಕೊಂಡು ವೈಕುಂಠಕ್ಕೆ ನಡೆವ ॥ ೨ ॥ ಪರಮಾನಂದವನೀವ। ನಿನ್ನ। ಸ್ಮರಣೆಯೆಂಬುದು ಎನ್ನ ಜೀವಕ್ಕೆ ಜೀವ॥ ವರಕೊಡುವುದೊಂದು ಭಾವ। ಈ। ಪರಿ ಪುಸಿಯಲ್ಲ ಪುರಂದರವಿಠಲ ॥ ೩ ॥ ಶ್ರೀಃ ॥

### ೧೬೮. ರಾಗ ಮಧ್ಯಮಾವತಿ, ಆದಿತಾಳ.

ನೆನೆಬೇಕು ನೆನೆಬೇಕು ನೆನೆಯಬೇಕಮ್ಮ ॥ ಪಲ್ಲ ॥ ಮನದ ಚಪಲ ಬುದ್ಧಿ ಇನ್ನೂ ಬಿಡದಮ್ಮ ॥ ಅನುಪಲ್ಲ ॥ ಎಡೆಬಿಡದಲೆ ನಿನ್ನ ಒಡಲ ಚಿಂತಿಸುವಿ। ಕಡಲಶಯನನ ನಾಮ ಬಿಡದೇ ಹಗಲಿರುಳು ॥ ೧ ॥ ಹೊತ್ತುಹೋಯಿತು ಇನ್ನು ವ್ಯರ್ಥವಾಗುವುದು। ಹತ್ತಿಲೆ ಇಹುದು ಕಣ್ಣೆತ್ತಿ ನೋಡಿದರೆ ॥ ೨ ॥ ಇಂದಿರಾರಮಣ ಶ್ರೀಪುರಂದರವಿಠಲ। ಮಂದರೋದ್ಧರನ ಆನಂದ ಯೆಂದೆಣಿಸಿ ॥ ೩ ॥ ಶ್ರೀಃ ॥

೧೬೯. ರಾಗ ಮಧ್ಯಮಾವತಿ, ಅಟತಾಳ.

ಬಡವ ನಿನಗೊಬ್ಬರ ಗೊಡವೆ ಯಾತಕ್ಕೊ । ಒಡವೆ ವಸ್ತು ತಾಯಿ ತಂದೆ । ಒಡೆಯ ಕೃಷ್ಣನಿರಲಿಕ್ಕಾಗಿ ॥ ಪಲ್ಲ ॥ ಮಡದಿಮಕ್ಕಳು ಎದುರಿಸಿದರೆ । ಕಡೆಗಣಿಸಿ ಕೈದುಡಕೀ ಕಂಡ್ಯ ॥ ಅಡಿಕೆಹೋಳಿಗೆ ಹೋದ ಮಾನ । ಆನೆ ಕೊಟ್ಟರೆ ಬಾರದೊ ॥ ೧ ॥ ಒಪ್ಪತ್ತು ಭಿಕ್ಷವ ಬೇಡು । ಒಬ್ಬರಿಗೊಂದಿಷ್ಟು ನೀಡು ॥ ಅಪ್ಪನಾದಚ್ಯುತನ ಪಾಡು । ಆನಂದದಿಂದೋಲ್ಯಾಡು ॥ ೨ ॥ ಭೋಗ್ಯ (ಯೋಗಕೆ) ಕರ್ಮಂಗಳು ಎಲ್ಲ । ನೀಗಿ ಕಳೆದು ಪೋಗುವ ತನಕ ॥ ಮಾಗಿ ಕೋಗಿಲೆಯಂದದಿ ನೀ । ಮುದುರಿಕೊಂಡಿರು ಒದರಬೇಡ ॥ ೩ ॥ ಓದು ತರ್ಕವೆಲ್ಲ ಭ್ರಾಂತಿ । ಆದಿದೇವನ ಕಾಣದನಕ ॥ ಬೂದಿ ಮುಚ್ಚಿದ ಕೆಂಡದಂತೆ । ಬುದ್ಧೀಲಿರು ನಾ ಹೇಳೀನಂತೆ ॥ ೪ ॥ ದೊರೆತನವಿದ್ದೇನು ಹೆಚ್ಚು । ಸಿರಿತನವಿದ್ದೇನು ಮೆಚ್ಚು ॥ ವರದ ಪುರಂದರವಿಟ್ಠಲನ್ನ । ನರದೇಹದಲಿ ನೋಡದನಕ ॥ ೫ ॥ ಶ್ರೀಃ ॥

೧೭೦. ರಾಗ ಕಾಂಬೋಧಿ, ಅಟತಾಳ.

ಆರು ಬದುಕಿದರೇನು ಆರು ಬಾಳಿದರೇನು । ಪೂರ್ವಜನ್ಮದ ಕರ್ಮವಿಧಿ ತೀರದನಕ ॥ ಪಲ್ಲ ॥ ಪತಿಭಕುತಿಯಿಲ್ಲದಿಹ ಸತಿಯಿದ್ದು ಫಲವೇನು । ಮತಿಯಿಲ್ಲದವಗೆ ಬೋಧಿಸಿದರೇನು ॥ ಪತಿಯಿಲ್ಲದವಳಿಗೆ ಬಹು ಭೋಗವಿದ್ದರೇನು । ಮತಿಹೀನನಾದಂಥ ಮಗನ ಗೊಡವೇನು ॥ ೧ ॥ ಜ್ಞಾನವಿಲ್ಲದವ ನಿತ್ಯ ಸ್ನಾನಮಾಡಿ ಫಲವೇನು । ದಾನಧರ್ಮವಿಲ್ಲದವನ ದಯವಾದರೇನು ॥ ಮಾನಾಭಿಮಾನಗಳ ಮರೆದವನ ಸಂಗವೇನು । ದೀನನಾದವನಿಗೆ ಧೈರ್ಯವಿದ್ದರೇನು ॥ ೨ ॥ ಕಣ್ಣಿಲ್ಲದಗೆ ಚಂದ್ರನುದಯದಾಭ್ರಮೆಯೇನು । ಹೆಣ್ಣಿಲ್ಲದಿಹ ಅಷ್ಟ ಭೋಗಂಗಳೇನು ॥ ಬಣ್ಣ ಬಂಗಾರವನು ಬಚ್ಚಿಟ್ಟು ಫಲವೇನು । ಅಣ್ಣ ತಮ್ಮಂದಿರನು ಅಗಲಿ ಸುಖವೇನು ॥ ॥ ೩ ॥ ಗುರು ದೈವವರಿಯದವ ಹಿರಿಯನಾದರೆಯೇನು । ಜರಿದು ಕೆಟ್ಟಾಡುವನ ಸರಸವೇನು ॥ ಮೊರೆಹೊಕ್ಕವರ ಕಾಯದವನ ಧೊರೆತನವೇನು । ಪರರಿಗುಪಕರಿಸದವ ಬಾಳಿ ಫಲವೇನು ॥ ೪ ॥ ವೇದಗಳ ಓದಿ ತಾ ವಾದಿ

ಸಲು ಫಲವೇನು । ಭೇದವೆಣಿಸುತಿಹನ ನೆಂಟತನವೇನು ॥ ವೋದದಿಂ ದ್ಧರಿಗರ್ಪಿಸದ ಕವಿತೆಯಿಂದೇನು । ಓದಿಸದೆ ಕೆಡಿಸುವ ತಂದೆಯಿದ್ದೇನು ॥ ॥ ೫ ॥ ಭಾವ ಶುದ್ಧಿಯಿಲ್ಲದವನ ದೇವತಾರ್ಚನೆಯೇನು । ಆವ ವರಗಳ ಕೊಡದ ದೇವರೇನು ॥ ದೇವ ಶ್ರೀಪುರಂದರವಿಠಲನ್ನ ಚರಣವನು । ಆವಾಗ ನೆನೆಯದಿಹ ಜಿಹ್ವೆಯಿಂದೇನು ॥ ೬ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೭೧. ರಾಗ ಪೀಲು, ಆದಿತಾಳ.

ಬವ್ವ ಬಂದಿತಲ್ಲ । ರಂಗಯ್ಯ । ಬವ್ವ ಬಂದಿತಲ್ಲ ॥ ಪಲ್ಲ ॥ ಬವ್ವ ನಿನ್ನ ಕಾಲು ಕಚ್ಚಿತೋ ಕೃಷ್ಣ ॥ ಅನುಪಲ್ಲ ॥ ಶರಗು ಪಿಡಿದು ನೀ ಹೇಳದೆ ಮಲಗೊ । ತಿರುಗಿದರೆ ನೋಡು ಮತ್ತಿಲ್ಲೆ ॥ ಬೂದಿಯ ಹಚ್ಚಿದೆ ಕೂದಲು ಬಿಚ್ಚಿದೆ । ಸ್ವಾದವ ಕಂಡು ಬಂದಿತಿಲ್ಲಿ ॥ ೧ ॥ ಹಿಡಿದ ತ್ರಿಶೂಲ ಪಿಡಿದ ಕಪಾಲ । ಮುಕ್ಕಣ್ಣಲಿ ಕಿಡಿ ಉದರಿಸುತ ॥ ಹಾವು ಕೊರಳಲಿಟ್ಟು ಹುಲಿಯ ಚರ್ಮವ ಹೊದ್ದು । ಸುತ್ತಲಿ ಬರುತಿದೆ ಬವ್ವತನದಂಡು । ॥ ೨ ॥ ಕಪ್ಪುಗೊರಳ ಬವ್ವ ಒಪ್ಪುವ ಎತ್ತನೇರಿ ॥ ತಪ್ಪದೆ ಬಂದೀತು ಬಿಡು ಮುನ್ನೆ ॥ ಅಪ್ಪ ಕೃಷ್ಣರಾಯ ಪುರಂದರವಿಠಲನ । ಒಪ್ಪಿಸಿಕೊಡುವೆನು ಈಗಲೆ ನಿನ್ನ । ೩ ॥ ಶ್ರೀಃ ॥

## ೧೭೨. ರಾಗ ಬೇಹಾಗ್ (ಹಿಂದುಸ್ಥಾನಿ ಕಾಫಿ), ಆದಿತಾಳ.

ಜಗಸನ್ಮೋಹನನೆ ಕೃಷ್ಣ ಜಗವಂ ಪಾಲಿಸನೆ ॥ ಪಲ್ಲ ॥ ಒಬ್ಬಳ ಬಸುರಿಂದಲಿ ಬಂದೆ ಮ । ತ್ತೊಬ್ಬಳ ಕೈಯಲಿ ನೀ ಬೆಳೆದೆ ॥ ಕೊಬ್ಬಿದ ದೈತ್ಯರ ಒಡಲ ಸೀಳಿದೆ ಇಂಥ । ತಬ್ಬಿಬ್ಬಾಟವನೆಲ್ಲಿ ಕಲಿತ್ಯೋ ರಂಗ ॥ ೧ ॥ ಲೋಕದೊಳಗೆ ನೀ ಶಿಶುವಾಗಿ ಮಾ । ಲೋಕವನೆಲ್ಲ ಬಾಯಲಿ ತೋರಿದೆ ॥ ಆಕಳು ಕಾಯುವ ಚಿಣ್ಣನೆಂದೆನಿಸಿದೆ । ಈಕುಟಿಲವನೆಲ್ಲ ಎಲ್ಲಿ ಕಲಿತ್ಯೋ ರಂಗ ॥ ೨ ॥ ಮಗುವಾಗಿ ಪೂತನಿಯ ಮೊಲೆಯನುಂಡೆ । ಜಗದಗಲಕೆ ಬೀಳಲುಕೆಡಹಿ ॥ ನಗುತ ನಗುತ ಗೋಪಿಮೊಲೆಯುಂಡೆ

ಇಂಥ । ತಗಿಬಿಗಿಯಾಟಗಳೆಲ್ಲಿ ಕಲಿತ್ಯೋ ರಂಗ ॥ ೩ ॥ ಮಡುವ ಧುಮುಕಿ ಕಾಳಿಂಗನ ಶಿರದಲಿ । ಮೃಡ ಸುರಪಾದ್ಯರು ಪೊಗಳುತಿರೆ ॥ ಹೆಡೆಯ ಮೇಲೆ ಕುಣಿದಾಡುತ ಆಡುತ । ಕಡೆಸಾರೆಂಬುದನೆಲ್ಲಿ ಕಲಿತ್ಯೋ ರಂಗ ॥ ॥ ೪ ॥ ಒಂದು ಪಾದವ ಭೂಮಿಯಲೂರಿ ಮ । ತ್ತೊಂದು ಪಾದದಿ ಗಗನವನಳೆದು ॥ ಒಂದು ಪಾದ ಬಲಿ ಶಿರದಲಿಟ್ಟೆ ಇಂಥ । ಚಂದದ ವಿದ್ಯವನೆಲ್ಲಿ ಕಲಿತ್ಯೋ ರಂಗ ॥ ೫ ॥ ನಂಬಿದ ಪ್ರಹ್ಲಾದನು ಸ್ತುತಿಸೆ ನೀ । ಕಂಭವನೊಡೆದು ಬಂದಾಕ್ಷಣದಿ ॥ ದೊಂಬಿಲಿ ದೈತ್ಯನ ಒಡಲ ಸೀಳಿದೆ ಇಂಥ ಆ । ಡಂಬರದಾಟವನೆಲ್ಲಿ ಕಲಿತ್ಯೋ ರಂಗ ॥ ೬ ॥ ಅಂಬರೀಷ ದ್ವಾದಶಿ ಸಾಧಿಸುತಿರೆ । ಬಂದು ದೂರ್ವಾಸರು ಶಾಪವ ಕೊಡಲು ॥ ಮುಂದಕೆ ಸಾಧನವಹುದೆಂದು ಚಕ್ರವ । ಹಿಂದಟ್ಟಿಸುವುದನೆಲ್ಲಿ ಕಲಿತ್ಯೋ ರಂಗ ॥ ॥ ೭ ॥ ವರಬಲದಿಂದಲಿ ಭಸ್ಮಾಸುರನು । ಹರನ ಶಿರದಿ ಕರವಿಡೆ ಬರಲು ॥ ತರುಣಿಯ ರೂಪವ ತಾಳಿ ಆ ದೈತ್ಯನ । ಹರಣವನಳಿದುದನೆಲ್ಲಿ ಕಲಿತ್ಯೋ ರಂಗ ॥ ೮ ॥ ವೇದಗಳರಸಿ ಕಾಣದ ಪರಬ್ರಹ್ಮ ನೀ । ಮೋದದಿಂದ ವಿದುರನ ಮನೆಯೈದಿ ॥ ಆದರದಿ ಪಾಲ ಕುಡಿದುಳಿದುದ ನೀ । ಮೇದಿನಿಗಿಳಿಸಿದುದೆಲ್ಲಿ ಕಲಿತ್ಯೋ ರಂಗ ॥ ೯ ॥ ದುರ್ಯೋಧನ ತನ್ನೊಡ್ಡೋಲಗದೊಳು । ಹರಿಯನು ಕರೆಸೆಂದರುಹಲು ಬಂದು ॥ ಧರಣಿಯುಂಗುಷ್ಟದಲೊತ್ತುತ ಅವನನು । ಉರುಳಿಸಿದಾಟವನೆಲ್ಲಿ ಕಲಿತ್ಯೋ ರಂಗ ॥ ೧೦ ॥ ಆ ಸಭೆಯಲಿ ಖಳ ದುರ್ಯೋಧನನಾಗ । ಮೋಸದಿ ಕೃಷ್ಣನ ಕಟ್ಟೆನಲು ॥ ಸಾಸಿರರೂಪಿನ ಕೃಷ್ಣನೆಂದೆನಿಸಿದ । ವೇಷವನೆಲ್ಲ ಎಲ್ಲಿ ಕಲಿತ್ಯೋ ರಂಗ ॥ ॥ ೧೧ ॥ ಸರ್ಪಬಾಣ ಮೊರೆಯುತ ಬರಲು ಕಂ । ದರ್ಪಿತನೆ ಕರುಣದಿ ನೀನು ॥ ಒಪ್ಪುವ ಪಾರ್ಥನ ರಥವ ನೆಲಕೆ ಒತ್ತಿ । ತಪ್ಪಿಸಿದಾಟವನೆಲ್ಲಿ ಕಲಿತ್ಯೋ ರಂಗ ॥ ೧೨ ॥ ದ್ರೋಣನ ಸಂಗ್ರಾಮದಿ ಹರಿಚಕ್ರವ । ಮಾಣದೆ ಸೂರ್ಯಗೆ ಮರೆಮಾಡಿ ॥ ಕಾಣಿಸಿ ಸೈಂಧವನನು ಕೊಲಿಸಲಾದೆ ಇಂಥ । ಜಾಣತನವ ನೀನೆಲ್ಲಿ ಕಲಿತ್ಯೋ ರಂಗ ॥ ೧೩ ॥ ಆ ಶಿರವಾತನ ತಂದೆಯ ಕರದಲಿ । ಸೂಸುತ ರಕುತವ ಬೀಳಲು ಅದನು ॥ ಬೀಸಿಬಿಸಾಡಲು ಅವನ ಶಿರಪನಾಗ । ಸಾಸಿರ ಮಾಡಿದುದೆಲ್ಲಿ ಕಲಿತ್ಯೋ ರಂಗ ॥ ೧೪ ॥

ಆದಿಮೂಲನೆ ಎಂದು ಕರಿರಾಜ ಕರೆಯಲು । ಯಾದವರಾಯ ನೀ ನಗುತಲಿ ಬಂದು ॥ ಆದರದಿಂದ ಗಜೇಂದ್ರನ ಸಲಹಿದೆ । ಆ ದಿವ್ಯಾಟಗಳೆಲ್ಲಿ ಕಲಿತ್ಯೋ ರಂಗ ॥ ೧೫ ॥ ಎಂದೆಂದಿಗು ನಿಮ್ಮ ಗುಣಗಳ ಪೊಗಳಲು । ಇಂದ್ರಾದಿಗಳಿಗೆ ಅಳವಲ್ಲ ॥ ಮಂದರಧರ ಶ್ರೀಪುರಂದರವಿಠಲನೆ । ಒಂದೊಂದಾಟವನೆಲ್ಲಿ ಕಲಿತ್ಯೋ ರಂಗ ॥ ೧೬ ॥ ಶ್ರೀಃ ॥

## ೧೭೩. ರಾಗ ಮೋಹನ, ಆದಿತಾಳ.

ಬಾರೋ ನೀ ಯೆನ್ನ ಮನಮಂದಿರಕ್ಕೆ । ತಡಮಾಡುವುದೇಕೆ । ಮಾರಜನಕ ಹರಿ ನಿನ್ನಗ್ಗಳಿಕೆ । ಸ್ಮರಿಸುವೆ ಕ್ಷಣಕ್ಷಣಕೆ ॥ ಪಲ್ಲ ॥ ಬಾರೊ ಬಾರೋ ಮಧುರಾಪುರಿ ಬಿಟ್ಟು । ಸೇರಿಕೊಳ್ಳದಿರೋ ವರಕರಿಪುರವ ॥ ॥ ಅನುಪಲ್ಲ ॥ ಕುಂತೀಮಕ್ಕಳ ಮನೆಗ್ಹೋದೇನೆಂದಿ । ಅವರ್ಹೈದುಮಂದಿ । ಸಂತೋಷಪಡಿಸುವರೆಂದು ತಿಳಿದಿ । ಎಂಜಲ ಬಳಿದಿ । ಕಂತುಪಿತ ಕೇಳೊ ಮುಂದೆ ನೀ ಮುದದಿ । ಬಂಡಿಯ ಹೊಡೆದಿ ॥ ಇಂತು ಪರಿಯ ನಾನೆಂತು ಪೇಳಲೊ । ಕಾಂತ ಎನ್ನ ಮನದಂತರ್ಯಾಮಿ ॥ ೧ ॥ ಗೋಕುಲದಲ್ಲಿರೆ ನಂದಗೋಪ । ನಿನ್ನ ಕೈಯಿಂದ । ಆಕಳ ಕಾಯಿಸುವನು ಅವ ಪಾಪ । ಅದು ಅಲ್ಲದಲೆ । ನೀ ಕೇಳೋ ಗೋಪಿಯರ ಅಪಲಾಪ । ಲಾಲಿಸು ನೀ ಭೂಪ ॥ ಈ ಕರೆಕರೆಯೊಳು ನೀ ಕೂಡಿರುವುದು । ಯಾಕೆಲೊ ಕಾಂತನೆ ಮಮಹೃತ್ಕಮಲಕೆ ॥ ೨ ॥ ದುಷ್ಟಮಾವನ ಮನೆಗ್ಹೋಗಲಿಬೇಡ । ಪಟ್ಟದಾನೆಗಳಿಂದ । ಘಟ್ಯಾಗಿ ನೋಲ್ತುಳಿಸುವನವ ಮೂಢ । ಮಲ್ಲರ ಕೈಯಿಂದ । ಕುಟ್ಟಿ ಕೆಡಹಿಸುವನವನು ಪ್ರಚಂಡ । ತಿಳುಹಿದೆನುದ್ದಂಡ ॥ ಇಷ್ಟುಪರಿಯ ಬಹು ಕಷ್ಟವೇತಕೆಲೊ । ಧಿಟ್ಟ ಪುರಂದರವಿಟ್ಠಲ ಕೃಷ್ಣ ॥ ೩ ॥ ಶ್ರೀಃ ॥

## ೧೭೪. ರಾಗ ಕಾಂಬೋಧಿ, ಝಂಪೆತಾಳ.

ಭ್ರಷ್ಟರಾದರು ಮನುಜರು ॥ ಪಲ್ಲ ॥ ಅಷ್ಟಮದ ಗರ್ವದಲಿ ಹರಿಸ್ಮರಣೆಯನು ಮರೆತು ॥ ಅನುಪಲ್ಲ ॥ ಮಡದಿಮಾತನು ಕೇಳಿ ನಡೆದುಕೊಂಬನು

ಭ್ರಷ್ಟ। ಪಡೆದ ಜನನಿಯನು ಬೈಯುವನು ಭ್ರಷ್ಟ ॥ ಕಡನ ಕೊಟ್ಟವ ರೊಡನೆ ಧಡಿತನ (?) ಮಾಡುವ ಭ್ರಷ್ಟ । ಬಡವರಿಗೆ ಕೊಟ್ಟ ನುಡಿ ನಡೆಸದವ ಭ್ರಷ್ಟ॥ ೧ ॥ ಬಾರದೊಡವೆಗಳನ್ನು ಬಯಸುವನು ತಾ ಭ್ರಷ್ಟ। ಸೇರದವರೊಡನೆ ಸ್ನೇಹಿಸುವ ಭ್ರಷ್ಟ ॥ ಶೌರಿದಿನ ವ್ರತವನಾಚರಿಸದವ ನತಿಭ್ರಷ್ಟ। ಸಾರಿಯರ ನೆಚ್ಚಿದಾ ನರನು ಕಡುಭ್ರಷ್ಟ ॥ ೨ ॥ ತಂತ್ರವನು ಅರಿಯದೆ ಮಂತ್ರ ಮಾಡುವ ಭ್ರಷ್ಟ। ಮಂತ್ರವಿಲ್ಲದ ವಿಪ್ರನತಿ ಭ್ರಷ್ಟನು॥ ಅಂತರವನರಿಯದೆ ನುಡಿವವನು ಭ್ರಷ್ಟ । ಸ್ವ । ತಂತ್ರವಿಲ್ಲದೆ ಕಾರ್ಯ ನಡೆಸುವನು ಭ್ರಷ್ಟ ॥ ೩ ॥ ಹರಿ ಚರಿತ್ರೆಗಳನ್ನು ಜರಿದಾಡುವವ ಭ್ರಷ್ಟ। ಹರಿಯ ಶರಣರ ನೋಡಿ ನಿಂದಿಸುವ ಭ್ರಷ್ಟ ॥ ಗುರು ಹಿರಿಯರ ಪಾದ ಕ್ಕೆರಗದವನವ ಭ್ರಷ್ಟ। ನೆರೆಹೊರೆಯರನು ನೋಡಿ ಕರುಬುವನು ಭ್ರಷ್ಟ॥ ॥ ೪ ॥ ಹರಿನಾಮವನುದಿನದಿ ಸ್ಮರಿಸದಾತನು ಭ್ರಷ್ಟ । ಕರುಣವಿಲ್ಲದ ವಿಪ್ರನವ ಭ್ರಷ್ಟನು॥ ಕರುಣಾಳು ನಮ್ಮ ಸಿರಿಪುರಂದರವಿಠಲನ್ನ। ಚರಣ ಕಮಲವ ಸ್ಮರಿಸದವ ಭ್ರಷ್ಟನಯ್ಯ ॥ ೫ ॥ ಶ್ರೀಃ ॥

೧೭೫. ರಾಗ ಆನಂದಭೈರವಿ, ಅಟತಾಳ.

ಮುಂಜಾನೆ ಯೆದ್ದು ಗೋವಿಂದನೆನ್ನಿ ॥ ಪಲ್ಲ ॥ ನಮ್ಮ। ನಂಜಿಪ ದುರಿತವು ದೂರವೆನ್ನಿ ॥ ಅನುಪಲ್ಲ ॥ ಅಸುರಸಂಹಾರಿಯೆನ್ನಿ ದಶಶಿರವೈರಿ ಯೆನ್ನಿ। ಶಿಶುವು ಮೊರೆಯಿಡಲು ರಕ್ಷಿಸಿದನೆನ್ನಿ ॥ ಅಸುರನರಣ್ಯದೊಳ್ ಭಸ್ಮವ ಮಾಡಲು । ವಸುಧೆಯೊಳ್ ನಾಟ್ಯವನಾಡಿದನೆನ್ನಿ ॥ ೧ ॥ ಬಲಿಯ ಬೇಡಿದನೆನ್ನಿ ಚೆಲುವ ವಾಮನನೆನ್ನಿ। ಲಲನೆಯ ಅಭಿಮಾನ ಕಾಯ್ದನೆನ್ನಿ॥ ಕಲಿಯುಗದಲಿ ಬಂದ ಕೃಷ್ಣಾವತಾರನೆನ್ನಿ। ಸಲೆ ಪಾಂಡು ಸುತರನ್ನು ಪಾಲಿಸಿದನೆನ್ನಿ ॥ ೨ ॥ ಕರುಣಾಕರನೆನ್ನಿ ಕಪಟನಾಟಕನೆನ್ನಿ। ಕರಿರಾಜನನು ಕಾಯ್ದ ಕೃಷ್ಣನೆನ್ನಿ ॥ ಪರಿಪರಿಯಿಂದಲಿ ಭಕ್ತರ ಸಲ ಹುವ । ವರದ ಪುರಂದರವಿಟ್ಠಲನೆನ್ನಿ ॥ ೩ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

೧೭೬. ರಾಗ ಮಧ್ಯಮಾವತಿ, ಅಟತಾಳ.

ಅಚ್ಯುತಾನಂತ ಗೋವಿಂದ । ಹರಿ । ಸಚ್ಚಿದಾನಂದ ಸ್ವರೂಪ ಮುಕುಂದ ॥ ಪಲ್ಲ ॥ ಕೇಶವ ಕೃಷ್ಣ ಮುಕುಂದ । ಹರಿ । ವಾಸುದೇವ ಗುರು ಜಗದಾದಿ ವಂದ್ಯ ॥ ಯಶೋದೆಯ ಸುಕೃತದ ಕಂದ । ಸ್ವಾಮಿ । ಶೇಷಶಯನ ಭಕ್ತಹೃದಯಾನಂದ ॥ ೧ ॥ ನಾರಾಯಣ ನಿಮ್ಮ ನಾಮ । ಯೆನ್ನ । ನಾಲಿಗೆ ಮೇಲಿರಬೇಕೆಂಬ ನೇಮ ॥ ನಾನು ಬೇಡುವೆ ನಿಮ್ಮ ನಾಮ । ಪ್ರಾಣ । ಪಯಣ ಸಮಯಕೊದಗಲಿ ಗುಣಧಾಮ ॥ ೨ ॥ ಮಾಧವ ಮಂಗಳಗಾತ್ರ । ಸ್ವಾಮಿ । ಯಾದವ ಕೈಲಾಸವಾಸನ ಮಿತ್ರ ॥ ಮಹಿಮೆ ಕೇಳಿದರೆ ವಿಚಿತ್ರ । ನಿನ್ನ । ಮನಮೆಚ್ಚಲಿ ಸತ್ಯಭಾಮಾ ಕಳತ್ರ ॥ ೩ ॥ ಗೋವಿಂದ ಗೋಪಾಲ ಬಾಲ । ಸೋಳ । ಸಾಸಿರ ಗೋಪೇರ ಆನಂದಲೀಲ ॥ ನೀಲಮಣಿ ಮುಕ್ತಾಮಾಲ । ನಿಮ್ಮ । ನೇನೆಂದು ಕರೆಯಲಿ ಸುಗ್ರೀವ ಪಾಲ ॥ ೪ ॥ ವಿಷ್ಣುಚಕ್ರವು ಬಂದು ಸುತ್ತಿ । ಮೂರು । ಸೃಷ್ಟಿಯನೆಲ್ಲ ತಿರುಗಿ ಬೆನ್ನಟ್ಟಿ ॥ ಕೃಷ್ಣ ಸಲಹೆಂದು ಮೊರೆಯಿಟ್ಟ । ಮುನಿ । ಶ್ರೇಷ್ಠಗಿಷ್ಟರ ಮೇಲೆ ಅಭಯವ ಕೊಟ್ಟೆ ॥ ೫ ॥ ಮಧುಸೂದನ ಮಾರಜನಕ । ಮದ । ಗಜ ಸೀಳಿ ಮಲ್ಲರ ಗೆಲಿದೆ ತವಕ ॥ ಒದಗಿ ಕಂಸನ ಕೊಂದ ಬಳಿಕ । ನೀ । ಮುದುಕಗೆ ಪಟ್ಟವ ಕಟ್ಟಿದ್ಯೊ ಧನಿಕ ॥ ೬ ॥ ತ್ರಿವಿಕ್ರಮ ತ್ರೈಲೋಕ್ಯನಾಥ । ದೇವ । ತ್ರಿಪುರದ ಸತಿಯರ ವ್ರತಕೆ ವಿಘಾತ ॥ ಯದುವಂಶ ಪಾಂಡವಪ್ರೀತ । ಯೆನ್ನ । ಹೃದಯದೊಳಡಗಿರೊ ಶ್ರೀಜಗನ್ನಾಥ ॥ ೭ ॥ ವಾಮನ ರೂಪಿಲಿ ಬಂದು । ಬಲಿಯ । ದಾನವ ಬೇಡಲು ಉಚಿತವು ಎಂದು ॥ ಧಾರೆಯನೆರೆಯಲು ಅಂದು । ಬೆಳೆದು । ಧಾರುಣಿಯೆಲ್ಲವನಳದ್ಯೊ ನೀನಂದು ॥ ೮ ॥ ಶ್ರೀಧರ ಶೃಂಗಾರ ಹಾರ । ದಿವ್ಯ । ಶ್ರೀವತ್ಸಲಾಂಛನ ಶ್ರೀರಘುವೀರ ॥ ವಾರಿಧಿಸಮಗಂಭೀರ ಧೀರ । ಕ್ರೂರ ರಕ್ಕಸರನೆಲ್ಲರ ಸಂಹಾರ ॥ ೯ ॥ ಹೃಷಿಕೇಶ ವೃಂದಾವನದಲಿ । ನೀ । ಹರುಷದಿ ಕೊಳಲನೂದುತ ಯಮುನೆಯಲಿ ॥ ಸತಿಯರ ಸಮ್ಮೇಳದಲಿ । ನೀ । ಧರಿಸಿದ್ಯೊ ಮಂದಾರಮಾಲೆ ಕೊರಳಲ್ಲಿ ॥ ೧೦ ॥ ಪದ್ಮನಾಭ ಕೇಳೊ ಘನ್ನ । ಪಾದ । ಪದ್ಮವ ತೋರಿಸೊ ಬೇಗನೆ ನಿನ್ನ ॥

ಮುದ್ದು ಮುಖವ ತೋರಿ ಯೆನ್ನ । ಬೇಗ । ಉದ್ಧಾರ ಮಾಡೆಂದು ಬೇಡುವೆ ನಿನ್ನ ॥ ೧೧ ॥ ದಾಮೋದರ ಗುಣಧಾಮ । ಸ್ವಾಮಿ । ದಾನವಾಂತಕ ಯದುಕುಲ ಸಾರ್ವಭೌಮ ॥ ನೀಲಮೇಘನಿಭಶ್ಯಾಮ । ಕೃಷ್ಣ । ನೀಳಾಪತಿಯೆಂಬ ಬಹು ಪುಣ್ಯನಾಮ ॥ ೧೨ ॥ ಸಂಕರ್ಷಣ ದನುಜಹರಣ । ದೇವ । ಪಂಕಜಮುಖಿ ದ್ರೌಪದಿ ಮೇಲೆ ಕರುಣ ॥ ಕುಂಕುಮಾಂಕಿತ ರೇಖಾಚರಣ । ನಿಜ । ಕಂಕಣ ಕೇಯೂರ ಕೌಸ್ತುಭಾಭರಣ ॥ ೧೩ ॥ ವಾಸುದೇವ ಕೇಳೊ ನಿನ್ನ । ದಿವ್ಯ । ಸಾಸಿರನಾಮವ ನೆನೆವನೆ ಧನ್ಯ ॥ ಬೇಸರದೆ ಸಲಹಬೇಕೆನ್ನ । ತುಸ । ಘಾಸಿಯ ಮಾಡದೆ ಕರುಣಾಸಂಪನ್ನ ॥ ೧೪ ॥ ಪ್ರದ್ಯುಮ್ನನೆಂದು ನಾ ಕರೆದೆ । ಎನ್ನ । ಬದ್ಧವಾದ ದುಷ್ಕರ್ಮವ ಕಳೆದೆ ॥ ದುರ್ಬುದ್ಧಿ ದುರ್ವಾಕ್ಯ ಮರೆದೆ । ಸಾಧು । ಸಜ್ಜನರ ಸಂಗ ನಿನ್ನಿಂದ ಬೆರೆದೆ ॥ ೧೫ ॥ ಅನಿರುದ್ಧ ಅನುದಿನದಲ್ಲಿ । ನೀ । ವಿನಯದಿಂದಿದ್ದಿ ಗೋಪಿಯರ ಮನೆಯಲ್ಲಿ ॥ ಸನಕಾದಿ ವಂದ್ಯ ನಿನ್ನಗಲಿ । ಒಂದು । ಕ್ಷಣ ಬಿಟ್ಟಿರಲಾರೆ ನಿಲ್ಲೊ ಮನದಲ್ಲಿ ॥ ೧೬ ॥ ಪುರುಷೋತ್ತಮಗಾರು ಸಾಟಿ । ಪರ । ಬ್ರಹ್ಮ ಸ್ವರೂಪಿಯೆ ನಿನಗಾರೊಪ್ಪೋಟಿ ॥ ಮಹಿಮೆ ಕೇಳಿದರೊಂದು ಕೋಟಿ । ನಿನ್ನ । ಹೃದಯದಿ ಕಂಡ ಬ್ರಹ್ಮಾಂಡ ಕೀಟಿ ॥ ೧೭ ॥ ಅಧೋಕ್ಷಜ ಅಸುರಸಂಹಾರಿ । ಕೃಷ್ಣ । ಅದ್ಭುತರೂಪ ಶಿಶುಪಾಲನ ವೈರಿ ॥ ಭಕ್ತರ ಪಾಲಿಪ ಶೌರಿ । ಅಜಾ । ಮಿಳ । ನಾರಿಗನೆನ್ನೆ ಕಾಯ್ದೆ ಮುರಾರಿ ॥ ೧೮ ॥ ನರಸಿಂಹರೂಪವ ತಾಳಿದಿ । ಕಂದ । ಕರೆಯೆ ಕಂಭದಿ ಬಂದು ಕರುಣದಿ ಕಾಯಿದಿ ॥ ದುರುಳ ಹಿರಣ್ಯಕನ ಸೀಳಿದಿ । ಅವನ । ಕರುಳ ಬಗೆದು ವನಮಾಲೆ ಹಾಕಿದಿ ॥ ೧೯ ॥ ಅಚ್ಯುತ ನೀನತಿಮುದ್ದು । ಗೋಪಿ ಬಚ್ಚಿಟ್ಟ ಹಾಲು ಮೊಸರು ಬೆಣ್ಣೆ ಮೆದ್ದು ॥ ತುಚ್ಛ ಶಕಟನ ಕಾಲಿಲೊದ್ದು । ಕಾಡು । ಕಿಚ್ಚು ನುಂಗಿ ಪಾಲಿಸಿದೆಯೊ ಗೆದ್ದು ॥ ೨೦ ॥ ಜನಾರ್ದನರೂಪ ನೀನಾಗಿ । ಎನ್ನ । ಮನದ ಕರ್ಮವ ತೊಲಗಿಸೊ ಮುಂದಾಗಿ ॥ ಮುನಿಗಳೆಲ್ಲರು ಒಂದಾಗಿ । ಈ । ತನು ನಿನ್ನದೆಂಬರೊ ಕೇಳೊ ನಿಜವಾಗಿ ॥ ೨೧ ॥ ಉಪೇಂದ್ರರೂಪದಿ ಬಂದಿ । ಅಪ್ರ । ಮೇಯ ಕಾಳಿಂಗನ ಮಡುವ ಧುಮುಕಿದಿ ॥ ನಾಗನ

ಹೆಡೆಗಳ ತುಳಿದಿ । ನಾಗ । ಪತ್ನಿಯರು ಬೇಡೆ ಪತಿಯ ಪಾಲಿಸಿದ ॥ ೨೨ ॥ ಹರಿ ಹರಿ ಯೆಂದರೆ ಪಾಪ । ರಾಶಿ । ಹರಿದು ಹೋಯಿತು ಎನ್ನ ಮನದ ಸಂತಾಪ । ಸರ್ವರೊಳಗೆ ವಿಶ್ವರೂಪ । ನಿನ್ನ । ನೆರೆ ನಂಬಿದವರನ್ನು ಸಲಹುವ ಭೂಪ ॥ ೨೩ ॥ ಕೃಷ್ಣ ಕೃಷ್ಣನೆಂಬ ಸೊಲ್ಲು । ಕೇಳಿ । ನಷ್ಟವಾಯಿತು ಎನ್ನ ಪಾಪಗಳೆಲ್ಲ ॥ ಮುಟ್ಟಿ ಭಜಿಸಿರೊ ನೀವೆಲ್ಲ । ಪುರಂದರ । ವಿಠಲನಲ್ಲದೆ ಮತ್ತೆ ಬೇರಿಲ್ಲ ॥ ೨೪ ॥ ಶ್ರೀಃ ॥

### ೧೭೭. ರಾಗ ಕಾಂಬೋಧಿ, ಝಂಪೆತಾಳ.

ಇದಕೊಳ್ಳಿ ಭವರೋಗಕೌಷಧವನು ॥ ಪಲ್ಲ ॥ ಇಂದ್ರಿಯವ ಜೈಸುವುದೆ ಇದಕೆ ಇಚ್ಛಾಪಥ್ಯ ॥ ಅನುಪಲ್ಲ ॥ ವಾಸುದೇವನ ನಾಮ ವಾತವಿಧ್ವಂಸಿನಿ । ಜನಾರ್ದನನ ನಾಮ ಜ್ವರಾಂಕುಶ ॥ ಮಾಧವನ ನಾಮವೇ ಮನಗಂಡ ಮಂಡೂರ । ಮಂಗಳಾತ್ಮನ ನಾಮ ಮಾಲ್ಯವಸಂತ ॥ ೧ ॥ ಚಿಂತಾಯಕನ ನಾಮ ತ್ರೈಲೋಕ್ಯ ಚಿಂತಾಮಣಿ । ಭುಜಗಶಯನನ ನಾಮ ಭೂಪತಿ-ಮಾತ್ರೆ । ರಾಜೀವಲೋಚನನ ನಾಮ ರಸಕರ್ಪೂರ । ಸೀತಾಪತಿಯ ನಾಮ ದಿವ್ಯ ಸಿಂಧೂರ ॥ ೨ ॥ ನಾರಾಯಣನ ನಾಮ ದಿವ್ಯ ತಾಮ್ರಭಸ್ಮ । ಲೋಕದೊಡೆಯನ ನಾಮ ಲೋಹಭಸ್ಮ ॥ ವೈಕುಂಠಪತಿಯೆಂಬ ವಂಗಭಸ್ಮವ ಕೊಳ್ಳಿ । ಶ್ರೀನಿವಾಸನ ನಾಮ ಸ್ವರ್ಣಭಸ್ಮ ॥ ॥ ೩ ॥ ರಾಮಚಂದ್ರನೆಂಬ ಪೂರ್ಣಚಂದ್ರೋದಯವು । ಕೃಷ್ಣ ಕೃಷ್ಣನೆಂಬ ಶ್ಲೇಷ್ಮಕುಠಾರ ॥ ವಾರಿಜಾಂಬಕನೆಂಬ ವಸಂತಕುಸುಮಾಕರ । ಕಮಲನಾಭನೆಂಬ ಕರ್ಣಚೂರ್ಣವಿದಕೋ ॥ ೪ ॥ ಇದನು ಕೊಂಡವರ ಪೆಸರನು ಪೇಳುವೆನು ಕೇಳಿ । ಮುದದಿ ಪ್ರಹ್ಲಾದ ಮುಚುಕುಂದ ಧ್ರುವನು ॥ ಸದಮಲೆ ದ್ರೌಪದಿಯು ಅಜಮಿಳನು ಬದುಕಿದರು । ಪದುಮಾಕ್ಷ ಪುರಂದರವಿಠಲನೆಂಬೌಷಧವ ॥ ೫ ॥ ಶ್ರೀಃ ॥

### ೧೭೮. ರಾಗ ಬಿಲಹರಿ, ಛಾಪುತಾಳ.

ಹ್ಯಾಗೆ ಮಾಡಲಿ ಈ ಮಗುವಿಗೇನಾಯಿತೋ ಇದ । ರಾಗವ ಬಲ್ಲವರು ತಿಳಿದು ಹೇಳಿ ॥ ಪಲ್ಲ ॥ ಕಣ್ಣ ಮುಚ್ಚನು ಯಾರು ದೃಷ್ಟಿಗೊಂಡರೊ

ಮೊಲೆಯ । ಸಣ್ಣನು ಇನ್ನಿರುಳು ಎರೆದ ನೀರು ॥ ತಣ್ಣಗಾದುದೊ ಏನೊ ಘುರುಘುರಿನುತಲಿದೆ । ಚಿಣ್ಣನು ಆಯೆಂದ ಬಾಯ್ಮುಚ್ಚನಮ್ಮ ॥ ॥ ೧ ॥ ಖಂಡ ಸಕ್ಕರೆ ಬೆಣ್ಣೆ ಕೊಟ್ಟರೊಲ್ಲದೆ ಮಣ್ಣ । ಹೆಂಡೆ ಬೇಡುವ ನಮ್ಮ ಕೈಲೇನ ಕೊಡಲಿ ॥ ಮಂಡೆ ಜಡೆಗಟ್ಟಿದೆ ಮಾಡಲಿದಕಿನ್ನೇನು । ಹಿಂಡು ಸತಿಯರ ದೃಷ್ಟಿ ಘನವಾಯಿತಮ್ಮ ॥ ೨ ॥ ಮೊಲೆಯುಂಬುವಾಗ ವೈಮರೆವಾಗುತಿದೆಯೆಂದು । ಕಲಿಕಿತನದಲೆನ್ನ ಕಾಡುತಾನೆ ॥ ನೆಲೆಯ ಬಲ್ಲವರಿನ್ನು ಇಳೆಯೊಳೊಬ್ಬರ ಕಾಣೆ । ಚೆಲುವ ಪುರಂದರವಿಠಲನೆ ಬಲ್ಲ ॥ ೩ ॥ ಶ್ರೀಃ ॥

## ೧೭೯. ರಾಗ ಕಾಂಬೋಧಿ, ಝಂಪೆತಾಳ.

ಸಿಟ್ಟು ಮಾಡಿದರುಂಟೆ ಶ್ರೀಕೃಷ್ಣನಲ್ಲಿ ॥ ಪಲ್ಲ ॥ ಕೊಟ್ಟು ಹುಟ್ಟದೆ ಮುನ್ನ ಈ ಸೃಷ್ಟಿಯಲ್ಲಿ ॥ ಅನುಪಲ್ಲ ॥ ನೆಲವ ತೋಡಿದರಿಲ್ಲ ಛಲದಿ ಹೋರಿದರಿಲ್ಲ । ಕುಲಗೆಟ್ಟರಿಲ್ಲ ಕುಪ್ಪರಿಸಿದರು ಇಲ್ಲ ॥ ಬಲವ ತೋರಿದರಿಲ್ಲ ಕೆಲಕೆ ಸಾರಿದರಿಲ್ಲ । ತಲೆಯ ಕಲ್ಲಿಗೆ ಹಾಯ್ದು ಒಡಕೊಂಡರಿಲ್ಲ ॥ ॥ ೧ ॥ ಧರಣಿಯಾಳುವ ಧೊರೆಯ ಓಲೈಸಿದರು ಇಲ್ಲ । ಉರಗನ ಬಿಲದೊಳಗೆ ಹೋದರು ಇಲ್ಲ ॥ ಗಿರಿಗಹ್ವರಂಗಳು ತೊಳಲಿ ಬಳಲಿದರಿಲ್ಲ । ಬರಿದೆ ಹಲವರಿಗೆ ಬಾಯ್ದೆರೆದರಿಲ್ಲ ॥ ೨ ॥ ದೊಂಬಲಾಗವ ಹಾಕಿ ಡಿಂಬ (ದಿಂಡು) ತಿರುಗಿದರಿಲ್ಲ । ತುಂಬಿರುವ ಊರೊಳಗೆ ತಿರಿತಿಂದರಿಲ್ಲ ॥ ಅಂಬುಜಾಕ್ಷ ಪುರಂದರಾವಿಠಲನ್ನ ಪಾ । ದಾಂಬುಜವ ನೆನೆನೆನೆದು ಸುಖಿಯಾಗು ಮನವೆ ॥ ೩ ॥ ಶ್ರೀಃ ॥

## ೧೮೦. ರಾಗ ಕೇದಾರಗೌಳ, ಅಟತಾಳ.

ಇನ್ನೇನು ಗತಿ ಯೆನಗೆಲೋ ಹರಿಯೆ ॥ ಪಲ್ಲ ॥ ನಿನ್ನವನೆನ್ನದೆ ಮೋಸ ಹೋದೆನೊ ರಂಗ ॥ ಅನುಪಲ್ಲ ॥ ಅಂಕದೊಳಾಡುವ ಶಿಶುಗಳ ಮುದ್ದಿನ । ಬಿಂಕದ ಸವಿನುಡಿಗಳ ಕೇಳುತ ॥ ಕಿಂಕಿಣಿ ಧ್ವನಿಗೆ ಕಿವಿಗೊಟ್ಟು ಕೇಳುತ । ಮಂಕಾದ ಹರಿಣದಂತಾದೆನಲ್ಲೋ ರಂಗ ॥ ೧ ॥ ಸಲೆ ನಿಜವೃತ್ತಿಯ ನುಳಿದು ದುರಾನ್ನವ । ನಲಿದುಂಡು ಹೊಟ್ಟೆಯ ಹೊರೆಯುತಲಿ ॥ ಗಳೆಯ

ತುದಿಯ ಮಾಂಸಕೆ ಬಂದೆರಗುತ್ತ । ಸಿಲುಕಿದ ಮೀನಿನಂತಾದೆನಲ್ಲೋ ರಂಗ ॥ ೨ ॥ ಪರವನಿತೆಯರ ಲಾವಣ್ಯಕೆ ಲೋಚನ ॥ ಚರಿಸುತ್ತಲವರ ಕೂಟವ ಬಯಸಿ ॥ ಉರಿವ ಕಿಚ್ಚು ತನಗೆ ಹಿತವೆಂದು ಅದರೊಳು । ಎರಗಿದ ಪತಂಗನಂತಾದೆನಲ್ಲೋ ರಂಗ ॥ ೩ ॥ ಲಂಪಟನಾಗಿ ನಾರೇರ ಮುಖಾಬ್ಜದ । ಸೊಂಪಿನ ಕಂಪನಾಘ್ರಾಣಿಸುತ ॥ ಸಂಪಿಗೆಯೆಸಳಿನ ಮೇಲೆ ಕುಳಿತಿರ್ದು । ಸೊಂಪಳಿದಳಿಯಂತೆ ಆದೆನಲ್ಲೋ ಕೃಷ್ಣ ॥ ೪ ॥ ತಡೆಯಲಾರದೆ ಗುಹ್ಯೇಂದ್ರಿಯ ಚಪಲವ । ಮಡದಿಯರಂಗ ಸಂಗವ ಬಯಸಿ ॥ ಒಡಲ ಕಿಚ್ಚಿಗೆ ಮೇಲೆ ಬಡಿಗಲ್ಲು ಕೆಡಹಿಕೊಂ । ಡಡಿಬಿದ್ದ ಮೂಷಕನಂತಾದೆನಲ್ಲೋ ಕೃಷ್ಣ ॥ ೫ ॥ ನೊಂದೆನಲ್ಲ ನಿಮ್ಮ ಮಹಿಮೆಯ ಕೇಳದೆ । ಮಂದನಾದೆನು ವಿಷಯವ ಬಯಸಿ ॥ ತಂದೆ ಶ್ರೀಪುರಂದರ ವಿಠಲ ನೀನೆ ದಯ । ದಿಂದೆಂದಿಗು ಭವ ದೂರಮಾಡೆಲೋ ಹರಿ ॥ ೫ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

### ೧೮೧. ರಾಗ ಆರಭಿ, ಏಕತಾಳ.

ರಂಗ ಕೊಳಲನೂದಲಾಗಿ । ಮಂಗಳಮಯವಾಯ್ತು ಧರೆ ಜ । ಗಂಗಳು ಚೈತನ್ಯ ಮರೆದು । ಅಂಗ ಪರವಶವಾದುವು ॥ ಪಲ್ಲ ॥ ತೀಡಿದ ಮಾರುತ ಮಂದಗತಿಗೈಯೆ । ಬಾಡಿದ ಬರಲು ಫಲಗೊಂಚಲು ಬಿಡೆ । ಪಾಡಲೊಲ್ಲವಳಿಕುಲಗಳು । ಬಾಡಿದ ಮಾಮರ ಚಿಗುರೊಡೆಯೆ ॥ ಹೇಡಿಗೊಂಡವು ಜಾಣ್ಮಕ್ಕಿ ಗಿಳಿ ಮಾ । ತಾಡದೆ ಕಳೆಗುಂದಿದುವು ಕೋಗಿಲೆ । ಓಡ್ಯಾಟ ವೈರಾಟ ಬಿಟ್ಟು ಖಗಮೃಗ । ಗಾಢನಿದ್ರಾವಶವಾದುವು ॥ ೧ ॥ ತಳದುದಕ ಉಕ್ಕೇರಿ ಬಂದವು । ತುಳುಕಿ ಚೆಲ್ಯಾಡಿ ನಿಂದಳು ಯಮುನೆ । ಮೇಲೆ ಮೇಲೋಡಿ ಮೇಘಾಳಿ ಧಾರಿಟ್ಟುವು । ಕಲ್ಲು ಕರಗಿ ನೀರಾದುವು ॥ ನಳಿನ ಚಂಪಕ ನಾಗ ಪುನ್ನಾಗ ಪಾ । ಟಲ ಶಾವಂತಿಗೆ ಕುಂದ ಬಕುಳವು । ಮಾಲತಿ ಜಾಜಿ ಪರಿಮಳ ಗೂಡಿತು । ನೀಲಾಂಗನಂಘ್ರಿಗೆರಗಿದವು ॥ ೨ ॥ ಮುದ್ದು ಮೋಹನನ ಮಂಜುಳ ಸಂಗೀತ । ಸದ್ದನಾಲೈಸಿ ಗೋಪಾಂಗನೆಯರೆಲ್ಲ । ಬುದ್ಧಿ ಸೂರ‍್ಯಾಡಿ ಆನಂದವಾರಿಧಿಯಲ್ಲಿ । ಬಿದ್ದು

ಪರವಶರಾದರು ॥ ಸಿದ್ಧಮುನಿಜನರಿದ್ದ ಸಮಾಧಿಯೊ । ಳಿದ್ದು ಕುಣಿದರು ಎದುರಿದುರಾಗಿ । ಗದ್ಗದುಗೆಯುರಸನೋಲ್ಯೈಸಿಕೊಂಡರು । ಗೆದ್ದರು ಭವ ಸಮುದ್ರವ । ೩ ॥ ಕೆಚ್ಚಲು ಬಿಗಿದು ತೊರೆಯುಲು ಮೊಲೆಯು । ವತ್ಸಗ ಳೊಡಲಾಸೆಯ ತೊರೆದೆಳೆಹುಲ್ಲ । ಕಚ್ಚಿರಲಲ್ಲಲ್ಲಿ ನಿಂದವು ಗೋವ್ಗಳು । ಪುಚ್ಛವನೆಗಹಿ ನೀಂಟಿಸಿ ॥ ಅಚ್ಯುತನಾಕೃತಿ ನೋಡಲು ಸುರರಿಗೆ । ಆಶ್ಚರ್ಯವಾಯಿತು ನಾವು ಕಂಡೆವೆಂದು । ಮೆಚ್ಚಿ ಮುಕುಂದನ ಲೀಲಾ ವಿನೋದಕೆ । ಹೆಚ್ಚಿನ ಕುಸುಮವ ಸುರಿದರು ॥ ೪ ॥ ಶ್ರೀಮನೋಹರ ಗೋಪಾಲಮೂರುತಿ । ಆ ಮಧುಕುಂಜವನದಿ ತ್ರಿಭಂಗಿಲಿ । ಹೇಮಾಂಬ ರವುಟ್ಟು ಗೀರ್ಗಂಧ ಕಸ್ತೂರಿ । ನಾಮ ಮಕುಟದ ಬೆಳಕಿನಲಿ ॥ ಧಾಮ ವನಮಾಲೆ ಬರ್ಹಿಭೂಷಿತ । ಸ್ವಾಮಿ ಪುರಂದರವಿಠಲರಾಯನು । ನಾಮಕ್ರಿಯ ಮೇಘರಂಜಿನಿ ಪಾಡೆ । ಸಾಮವೇದ ನಮೋ ನಮೋ ಎನ್ನೆ ॥ ೫ ॥ ಶ್ರೀಃ ॥

## ೧೮೨. ರಾಗ ಪೂರ್ವಕಲ್ಯಾಣಿ, ಛಾಪುತಾಳ.

ಬ್ರಹ್ಮಾಂಡದೊಳಗೆ ಅರಸಿ ನೋಡಲು । ನಮ್ಮೂರೇ ವಾಸಿ ॥ ಪಲ್ಲ ॥ ರಮ್ಮೆಯರಸನು ಸರ್ವದ ವಾಸಿಪ । ಸುಮ್ಮಾನದಿ ತಾನು ॥ ಅನುಪಲ್ಲ ॥ ಜನನ ಮರಣವಿಲ್ಲ । ಅಲ್ಲಿ । ಉಣುವ ದುಃಖವಿಲ್ಲ ॥ ಅನುಜ ತನುಜರು ಅಲ್ಲಿಲ್ಲ । ಅನುಮಾನದ ಸೊಲ್ಲೇ ಇಲ್ಲ ॥ ೧ ॥ ನಿದ್ರೆಯು ಅಲ್ಲಿಲ್ಲ । ರೋಗೋ । ಪದ್ರಗಳಲ್ಲಿಲ್ಲ ॥ ಕ್ಷುದ್ರ ಜನಂಗಳು ಅಲ್ಲಿಲ್ಲ । ಸ । ಮುದ್ರ ಶಯನ ಬಲ್ಲ ಎಲ್ಲ ॥ ೨ ॥ ಸಾಧುಜನರ ಕೂಡೆ । ಮೋಕ್ಷಕೆ । ಸಾಧನೆಗಳ ಮಾಡೆ ॥ ಮಾಧವ ಪುರಂದರವಿಟ್ಠಲರಾಯನು । ಆದರಿಸುವನಲ್ಲೆ ಬಲ್ಲೆ ॥ ೩ ॥ ಶ್ರೀಃ ॥

## ೧೮೩. ರಾಗ ಕಾಂಬೋಧಿ, ಝಂಪೆತಾಳ.

ದಾಸನೆಂತಾಗುವೆನು ಧರೆಯೊಳಗೆ ನಾನು ॥ ಪಲ್ಲ ॥ ವಾಸುದೇವನಲ್ಲಿ ಲೇಶ ಭಕುತಿಯು ಕಾಣೆ ॥ ಅನುಪಲ್ಲ ॥ ಗೂಟನಾಮವ ಹೊಡೆದು ಗುಂಡು ತಂಬಿಗೆ ಹಿಡಿದು । ಗೋಟಂಚು ದೋತರ ಮಡಿಯನುಟ್ಟು ॥

ದಾಟುಕಾಲಿಡುತ ನಾ ಧರೆಯೊಳಗೆ ಬರಲೆನ್ನ । ಬೂಟಕತನ ನೋಡಿ ಭ್ರಮಿಸದಿರಿ ಜನರೆ ॥ ೧ ॥ ಅರ್ಥದಲ್ಲೇ ಮನಸು ಆಸಕ್ತವಾಗಿದ್ದು । ವ್ಯರ್ಥವಾಯಿತು ಜನ್ಮ ವಸುಧೆಯೊಳಗೆ ॥ ಅರ್ಥಿಯಿಂದಲಿ ಹರಿಯ ಅರ್ಚಿಸಿದ್ದಿಲ್ಲ ನಾ । ಸತ್ಯ ಶೌಚಗಳರಿಯೆ ಸಜ್ಜನರು ಕೇಳಿ ॥ ೨ ॥ ಇಂದಿರೇಶನ ಪೂಜೆ ಎಂದು ಮಾಡಿದ್ದಿಲ್ಲ । ಸಂಧ್ಯಾನ ಜಪತಪಗಳೊಂದನರಿಯೆ ॥ ಒಂದು ಸಾಧನ ಕಾಣೆ ಪುರಂದರವಿಟ್ಠಲನ । ದ್ವಂದ್ವ ಪಾದವ ನಂಬಿ ಅರಿತು ಭಜಿಸದಲೆ ॥ ೩ ॥ ಶ್ರೀಃ ॥

೧೮೪. ರಾಗ ಮುಖಾರಿ, ಅಟತಾಳ.

ಜಯಮಂಗಳಂ ನಿತ್ಯ ಶುಭಮಂಗಳಂ ॥ ಪಲ್ಲ ॥ ವಾನರೇಂದ್ರನ ರೂಪವ ತಾಳಿದ । ವನಧಿಯ ದಾಟಿ ಜಾನಕಿಗುಂಗುರವಿತ್ತ ॥ ದಾನವೇಂದ್ರನ ವನವನೆಲ್ಲವ ಕಿತ್ತು ಪಟ್ಟಣವನೆ ಸುಟ್ಟು । ಇನಕುಲಜ ರಾಮಗೆರಗಿದ್ದ ಹನುಮಂತಗೆ ॥ ೧ ॥ ದುಷ್ಟದುರ್ಯೋಧನನ ಮಡುಹಿ । ಜ್ಯೇಷ್ಠಗೆ ಪಟ್ಟಗಟ್ಟಿ ಅವನಿಯೊಳು ಮೆರೆದವನಿಗೆ ॥ ದುಷ್ಟರಾಯರನೆಲ್ಲ ಮಡುಹಿದಖಿಳೇಶ್ವರ । ಕೃಷ್ಣಗತಿ ಪ್ರಿಯನಾದ ಭೀಮಸೇನಗೇ ॥ ೨ ॥ ಯತಿರೂಪವ ತಾಳಿ ಶ್ರುತಿ ಶಾಸ್ತ್ರದಿಂ ಶ್ರೀ । ಪತಿಯು ಸರ್ವೋತ್ತಮನೆಂದೆನಿಸಿದವಗೆ ॥ ಯತಿ ವೇದ ವ್ಯಾಸನಾದ ಪುರಂದರವಿಠಲನ್ನ । ಗತಿಮಾರ್ಗವ ತೋರಿದ ಮಧ್ವ ಮುನಿಗೆ ॥ ೩ ॥ ಶ್ರೀಃ ॥

೧೮೫. ರಾಗ ನಾದನಾಮಕ್ರಿಯೆ, ಛಾಪುತಾಳ. ✓

ಮಂಗಳ ಶ್ರೀತುಳಸಿದೇವಿಗೆ । ಜಯ । ಮಂಗಳ ವೃಂದಾವನದೇವಿಗೆ ॥ ಪಲ್ಲ ॥ ನೋಡಿದ ಮಾತ್ರಕ್ಕೆ ದೋಷಸಂಹಾರಿಗೆ । ಬೇಡಿದ ವರಗಳ ಕೊಡುವಳಿಗೆ ॥ ಮಾಡೆ ವಂದನೆಯನು ಮನುಜರ ಪಾಪದ । ಗೂಡ ನೀಡ್ಯಾಡುವ ಗುಣವಂತೆಗೆ ॥ ೧ ॥ ಮುಟ್ಟಿದ ಮಾತ್ರಕ್ಕೆ ಮುಕ್ತರ ಮಾಡುವ । ಮುದದಿಂದುದ್ಧರಿಸುವ ಮುನಿವಂದ್ಯೆಗೆ ॥ ಕೊಟ್ಟರೆ ನೀರನು ಬೇರಿಗೆ ಕಾಲನ ಮುಟ್ಟಲೀಸದ ಹಾಗೆ ಮಾಳ್ಪಳಿಗೆ ॥ ೨ ॥ ಬಿತ್ತಿ ಬೆಳೆಸಿ ತನ್ನ ಹೆಚ್ಚಿಸಿದವರಿಗೆ । ಚಿತ್ತವಲ್ಲಭ ಕೃಷ್ಣನ್ನುರುಪದಲಿ ॥ ಅತ್ಯಂತವಾಗಿ

ತಾ ತೋರಿ ಭವದ ಬೇರ । ಕಿತ್ತು ಬಿಸಾಡುವ ಕೋಮಲೆಗೆ ॥ ೩ ॥ ಕೋಮಲವಾಗಿದ್ದ ದಳ ಮಂಜರಿಗಳ । ಪ್ರೇಮದಿಂದಲಿ ತಂದು ಶ್ರೀ ಹರಿಗೆ ॥ ನೇಮದಿಂದರ್ಚಿಸೆ ಪರಮಾತ್ಮನೊಳು ಜೀವ । ಕಾಮಿತಾರ್ಥವ ನೀವ ಸದ್ಗುಣಿಗೆ ॥ ೪ ॥ ಕಾಷ್ಠವ ತಂದು ಗಂಧವ ಮಾಡಿ ಕೃಷ್ಣಗೆ । ನಿಷ್ಠೆಯಿಂದಲಿ ಲೇಪನ ಮಾಳ್ಪರ ॥ ಜ್ಯೇಷ್ಠರೆನಿಸಿ ವೈಕುಂಠದಿ ನಿಲಿಸಿ ಸಂ । ತುಷ್ಟರ ಮಾಡುವ ಸೌಭಾಗ್ಯೆಗೆ ॥ ೫ ॥ ಅನ್ನವನುಂಡರು ನೀಚರ ಮನೆಯಲ್ಲಿ । ಉನ್ನಂತ ಪಾಪವ ಮಾಡಿದ್ದರು ॥ ತನ್ನ ದಳವನೊಂದ ಕರ್ಣದಲ್ಲಿಟ್ಟರೆ । ಧನ್ಯರ ಮಾಡುವ ದಯವಂತೆಗೆ ॥ ೬ ॥ ಸರಸಿಜನಾಭನ ಸಲುಗೆಯ ರಾಣಿಗೆ । ಶರಣಜನರ ಪೊರೆವ ಸದ್ಗುಣಿಗೆ ॥ ತಿರುಪತಿ ನಿಲಯ ಶ್ರೀಪುರಂದರವಿಠಲನ । ಚರಣಸೇವಕಳಾದ ಚಿನ್ಮಯೆಗೆ ॥ ೭ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೮೬. ರಾಗ ಜೋಗುಳ, ಅಟತಾಳ.

ದೇವಕಿಯುದರ ಸಂಜಾತನೆ ತ್ರಪ್ವಿ । ಕಾಮನ ಪಿತ ಕಮಲಾಕ್ಷನೆ ತ್ರಪ್ವಿ ॥ ಶ್ರೀವೈಭವ ಸಚ್ಚಿದಾನಂದ ತ್ರಪ್ವಿ । ಭಾವಕಿ ಗೋಪಿಯ ಕಂದನೆ ತ್ರಪ್ವಿ ॥ ೧ ॥ ಮಧುರೆಯೊಳುದಿಸಿದ ಮಹಿಮನೆ ಜೋಜೋ । ಯದು ಕುಲತಿಲಕ ಯಾದವರಾಯ ಜೋಜೋ । ಮಧುಕೈಟಭ ಮುರಮರ್ದನ ಜೋಜೋ । ಚದುರನೆನಿಸಿ ತುರುಗಳ ಕಾಯ್ದೆ ಜೋಜೋ ॥ ೨ ॥ ಗೋಕುಲಪಾಲಕ ಗೋವಿಂದ ತ್ರಪ್ವಿ । ಶ್ರೀಕುಚ ಕುಂಕುಮಾಂಕಿತ ಕೃಷ್ಣ ತ್ರಪ್ವಿ ॥ ಪಾಕಶಾಸನ ಮುಖ್ಯ ಸುರವಂದ್ಯ ತ್ರಪ್ವಿ । ಲೋಕವೀರೇಳ ಪೆತ್ತಾತನೆ ತ್ರಪ್ವಿ ॥ ೩ ॥ ಶ್ರುತಿಚೋರಸಂಹಾರಕ ದೇವ ಜೋಜೋ । ಜತನದಿ ಸುರರಿಗಮೃತವಿತ್ತೆ ಜೋಜೋ ॥ ಸತಿಯ ಕದ್ದೊಯ್ದನ ಶೀಳ್ದೆ ನೀ ಜೋಜೋ । ಮತಿಯುತ ಬಾಲಕನತಿರಕ್ಷ ಜೋಜೋ ॥ ೪ ॥ ಕ್ಷಿತಿಯ ಈರಡಿಮಾಡ್ದ ವಾಮನ ತ್ರಪ್ವಿ । ಯತಿವಂಶ ಜನನ ಭಾರ್ಗವ ರೂಪ ತ್ರಪ್ವಿ ॥ ಕ್ರತುವ ರಕ್ಷಕ ಕಾಕುಸ್ಥನೆ ತ್ರಪ್ವಿ । ರತಿಪತಿಪಿತ ಸುರ ನುತ ಕೃಷ್ಣ ತ್ರಪ್ವಿ ॥ ೫ ॥ ಗೋಪಿಕಾನಂದ ಮುಕುಂದನೆ ಜೋಜೋ ।

ಭೂಪರೊಳ್ಕಾದಿ ಬಳಲಿದನೆ ಜೋಜೋ ॥ ಶ್ರೀಪುರುಷೋತ್ತಮ ನರ ಸಿಂಹ ಜೋಜೋ । ಅಪಾರ ಮಹಿಮಾರ್ಣವ ತೃಪ್ತಿ ಜೋಜೋ ॥ ೬ ॥ ಮಣ್ಣೊಳಗಾಡಿ ನೀ ಬಂದೆಯ ತೃಪ್ತಿ । ಬೆಣ್ಣೆಯ ಬೇಡೆ ಬಯ್ದರೆ ಕಂದ ತೃಪ್ತಿ ॥ ಕಣ್ಣದೃಷ್ಟಿಗೆ ಕರಗದ ಕಂದ ತೃಪ್ತಿ । ಚಿಣ್ಣ ಸುಮ್ಮನೆಯಿರು ಶ್ರೀಕೃಷ್ಣ ತೃಪ್ತಿ ॥ ೭ ॥ ತಾರಕಸತಿವ್ರತಹಾರಕ ಜೋಜೋ । ವಾರಣ ಹಯವೇರಿ ಮೆರೆದನೆ ಜೋಜೋ॥ ಸಾರಿದವರ ಸಂತೈಸುವೆ ಜೋಜೋ। ಶ್ರೀರಮಾಕಾಂತ ಶ್ರೀಕೃಷ್ಣನೆ ಜೋಜೋ ॥ ೮ ॥ ಶರಣಾಗತ ವಜ್ರಪಂಜರ ತೃಪ್ತಿ । ಕರುಣಾಕರ ಕಮಲಾಕ್ಷನೆ ತೃಪ್ತಿ ॥ ಧರಣೀಧರಶಾಯಿ ಶ್ರೀವರ ತೃಪ್ತಿ । ವರದ ಶ್ರೀಪುರಂದರವಿಠಲನೆ ತೃಪ್ತಿ ॥ ೯ ॥ ಶ್ರೀಃ ॥

## ೧೮೭. ರಾಗ ಪೀಲು, ಆದಿತಾಳ.

ಲಾಲಿ ಲಾಲಿ ನಮ್ಮ ಹರಿಯೆ ಲಾಲಿ ॥ ಪಲ್ಲ ॥ ಸುರನರರಿಗೆ ಒಲಿದು ಕರುಣವ ಬೀರುವ ಧೊರೆಯೆ ಲಾಲಿ ॥ ಅನುಪಲ್ಲ ॥ ರಾಮ ಲಾಲಿ ಮೇಘ ಶ್ಯಾಮ ಲಾಲಿ । ರಮಾಮನೋಹರ ಅಮಿತ ಸದ್ಗುಣಧಾಮ ಲಾಲಿ ॥ ॥ ೧ ॥ ಕೃಷ್ಣ ಲಾಲಿ ಸರ್ವೋತ್ಕೃಷ್ಟ ಲಾಲಿ । ದುಷ್ಟರ ಶಿಕ್ಷಿಸಿ ಶಿಷ್ಟರ ಪೊರೆವ ಸಂತುಷ್ಟ ಲಾಲಿ ॥ ೨ ॥ ರಂಗ ಲಾಲಿ ಮಂಗಳಾಂಗ ಲಾಲಿ । ಗಂಗೆಯ ಪಡೆದ ತುಂಗಮಹಿಮ ನರಸಿಂಗ ಲಾಲಿ ॥ ೩ ॥ ನಂದ ಲಾಲಿ ಗೋಪಿ ಕಂದ ಲಾಲಿ । ಮಂದರಗಿರಿಧರ ಮಧುಸೂದನ ಮುಕುಂದ ಲಾಲಿ ॥ ೪ ॥ ಶೂರ ಲಾಲಿ ರಣಧೀರ ಲಾಲಿ । ಮಾರನಯ್ಯ ನಮ್ಮ ಗುರು ಪುರಂದರವಿಠಲ ಲಾಲಿ ॥ ೫ ॥ ಶ್ರೀಃ ॥

## ೧೮೮. ರಾಗ ಧನ್ಯಾಸಿ, ಆದಿತಾಳ.

ಪಂಕಜಮುಖಿಯರೆಲ್ಲರು ಬಂದು ಲಕ್ಷ್ಮಿ । ವೆಂಕಟರಮಣಗಾರತಿ ಯೆತ್ತಿರೆ ॥ ಪಲ್ಲ ॥ ಮತ್ಸ್ಯಾವತಾರಗೆ ಮಂದರೋದ್ಧಾರಗೆ । ಅಚ್ಚರಿಯಿಂದ ಭೂಮಿ ತಂದವಗೆ ॥ ಹೆಚ್ಚಾದ ಉಕ್ಕಿನ ಕಂಭದಿಂದಲಿ ಬಂದ । ಲಕ್ಷ್ಮಿ ನರಸಿಂಹಗಾರತಿಯೆತ್ತಿರೆ ॥ ೧ ॥ ವಾಮನರೂಪಿಲಿ ದಾನ ಬೇಡಿದವಗೆ । ಪ್ರೇಮದಿ ಕೊಡಲಿಯ ಪಿಡಿದವಗೆ ॥ ರಾಮಚಂದ್ರನಾಗಿ ದಶಶಿರನನು

ಕೊಂದ । ಸ್ವಾಮಿ ಶ್ರೀಕೃಷ್ಣಗಾರತಿಯೆತ್ತಿರೆ ॥ ೨ ॥ ಬತ್ತಲೆ ನಿಂತಗೆ ಬೌದ್ಧಾವತಾರಗೆ । ಉತ್ತಮ ಅಶ್ವವನೇರಿದಗೆ ॥ ಭಕ್ತರ ಸಲಹುವ ಪುರಂದರವಿಠಲಗೆ । ಮುತ್ತೈದೆಯರಾರತಿಯೆತ್ತಿರೆ ॥ ೩ ॥ ಶ್ರೀಃ ॥

೧೮೯. ರಾಗ ಸೌರಾಷ್ಟ್ರ. ಆದಿತಾಳ.

ಮಂಗಳಂ ಜಯ ಮಂಗಳಂ । ಮಂಗಳಂ ಶುಭ ಮಂಗಳಂ ॥ ಪಲ್ಲ ॥ ಆಕ್ರೂರಗೊಲಿದ ತ್ರಿವಿಕ್ರಮಗೆ । ನಕ್ರನ ಗೆಲಿದ ಪರಾಕ್ರಮಿಗೆ ॥ ಶಕ್ರನ ಗರ್ವಪಹಾರವ ಮಾಡಿದ । ಶುಕ್ರನ ಶಿಷ್ಯನ ಗೆಲಿದವಗೆ ॥ ೧ ॥ ಗಂಗೆಯ ಪಡದ ಶ್ರೀರಂಗನಿಗೆ । ರಂಗುಮಾಣಿಕದುಂಗುರದವಗೆ ॥ ಭೃಂಗಕುಂತಳೆ ಯರ ವ್ರತವನೆ ಕೆಡಿಸಿದ । ಅಂಗಜನೈಯ ಶುಭಾಂಗನಿಗೆ ॥ ೨ ॥ ಧರೆ ಯೊಳಧಿಕ ವೆಂಕಟಾಚಲಗೆ । ಸ್ಥಿರವಾಗಿ ಪುಷ್ಕರಿಣಿಲಿ ನೆಲಿಸಿಹಗೆ ॥ ಪರ ತರತತ್ವ ಶ್ರೀಪುರಂದರವಿಠಲ । ವರವೆಂಕಟೇಶ ಶ್ರೀನಿವಾಸಗೆ ॥ ೩ ॥ ಶ್ರೀಃ ॥

೧೯೦. ಶ್ರೀರಾಗ, ಆದಿತಾಳ.

ಜಯ ಜಯ ಮಂಗಳ ಹರಿಗೆ । ಜಯ ಜಯ ಮಂಗಳ ಶಿರಿಗೆ । ಜಯ ಜಯ ಮಂಗಳ ವರದಪುರಂದರವಿಠಲಗೆ ॥ ೧ ॥ ಶುಭ ಇದು ಶೋಭನ ಹರಿಗೆ । ಶುಭ ಇದು ಶೋಭನ ಸಿರಿಗೆ । ಶುಭ ಇದು ಶೋಭನ ವರದ ಪುರಂ ದರವಿಠಲಗೆ ॥ ೨ ॥ ಪರಮಾನಂದವು ಹರಿಗೆ । ಪರಮಾನಂದವು ಸಿರಿಗೆ । ಪರಮಾನಂದವು ವರದಪುರಂದರವಿಠಲಗೆ ॥ ೩ ॥ ಜಯ ಜಯ ಪಂಕಜ ಹರಿಗೆ । ಜಯ ಜಯ ಪಂಕಜ ಸಿರಿಗೆ । ಜಯ ಜಯ ಪಂಕಜ ವರದಪುರಂ ದರವಿಠಲಗೆ ॥ ೪ ॥ ಜಯ ಜಯ ನಂದನ ಸುತಗೆ । ಜಯ ಜಯ ಭೀಷ್ಮಕ ಸುತೆಗೆ । ಜಯ ಜಯ ದಂ[illegible] ವರದಪುರಂದರವಿಠಲಗೆ ॥ ೫ ॥ ಶ್ರೀಃ ॥

॥ ಶ್ರೀಮಧ್ವೇಶಾರ್ಪಣಮಸ್ತು ॥

ಪುರಂದರದಾಸರಕೀರ್ತನೆಗಳ ನಾಲ್ಕನೇ ಭಾಗವು

**ಸಂಪೂರ್ಣವು.**

॥ ಶ್ರೀಕೃಷ್ಣಾರ್ಪಣಮಸ್ತು ॥